## ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಪೀಠಾರೋಹಣ ವಜ್ರ ಮಹೋತ್ಸವ ಪ್ರತಿಷ್ಠಾನ.

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572 104

- ವಿದ್ಯೆ ಮತ್ತು ದಾಸೋಹಕ್ಕೆ ಶ್ರೀ ಸಿದ್ಧಗಂಗೆ ನಾಡಿನಲ್ಲಿ ಸುಪ್ರಸಿದ್ಧ ಕ್ಷೇತ್ರ.
- ಇಲ್ಲಿಯ ಮಾನವೀಯ ಸೇವಾ ಕಾರ್ಯಗಳು ಸಾಗರವನ್ನು ಹೋಲುತ್ತವೆ.
- ಇಂಥಹ ವಿಶಿಷ್ಟ ಸೇವಾ ಕೇಂದ್ರವಾಗಿ ರೂಪಿಸಿದವರು ಪೂಜ್ಯ ಶ್ರೀ ಶ್ರೀ ಗಳು.
- ನಿರಂತರ ಸೇವೆಯೇ ಅವರ ಬದುಕಿನ ದಿನಚರಿಯಾಗಿದೆ.
- 88 ರ ಹರಯದಲ್ಲೂ ದಣಿವರಿಯದ ಬದುಕು ಅವರದಾಗಿದೆ.
- ಶ್ರೀ ಶ್ರೀ ಗಳ ಮಹಾನ್ ಸಾಧನೆಯ ಪ್ರತೀಕವಾಗಿ ಸ್ಮಾರಕಗಳು ತಲೆ ಎತ್ತಿವೆ.
- ಈ ಯೋಜನೆಯ ವೆಚ್ಚ **5 ಕೋಟಿ ರೂಗಳು.** ಮುಕ್ಕಾಲು ಭಾಗದಷ್ಟು ಕಟ್ಟಡಗಳ ಕೆಲಸ ಮುಗಿದಿದೆ.
- ಈ ಭವ್ಯ ದಿವ್ಯ ಸ್ಮಾರಕಗಳು ಶ್ರೀ ಶ್ರೀ ಗಳ ಮಹಾನ್ ವ್ಯಕ್ತಿತ್ವ, ಸೇವಾತತ್ಪರತೆ, ವಿದ್ಯಾ ಪ್ರಸಾರ ದೀಕ್ಷೆ ಮತ್ತು ಮಾನವೀಯ ಮೌಲ್ಯಗಳನ್ನು ಮುಂದಿನ ಪೀಳಿಗೆಗೆ ಸ್ಫೂರ್ತಿ ನೀಡುವುದು ಮಾತ್ರವಲ್ಲದೆ, ಅವರ ನಿರಂತರ ದಣಿವರಿಯದ ಬದುಕಿನ ಸಂದೇಶವನ್ನು ಶತ, ಶತಮಾನಗಳು ಸಾರುತ್ತವೆ.
- 1996 **ನೇ ಮಾರ್ಚ್** ತಿಂಗಳಲ್ಲಿ ವಜ್ರಮಹೋತ್ಸವ ಆಚರಿಸಲು ತೀರ್ಮಾನಿಸಲಾಗಿದೆ. ಬೃಹತ್‌ಸ್ಮಾರಕ ಭವನಗಳನ್ನು ಶ್ರೀ ಮಠಕ್ಕೆ ಕೃತಜ್ಞತಾಪೂರ್ವಕವಾಗಿ ಒಪ್ಪಿಸಲಾಗುತ್ತದೆ.
- ನಾಡಿನ ಭಕ್ತಾದಿಗಳು, ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಎಲ್ಲ ಅಭಿಮಾನಿಗಳು ಉದಾರವಾಗಿ ಕಾಣಿಕೆ ನೀಡುವುದರೊಂದಿಗೆ ಸ್ಮಾರಕ ಯೋಜನೆಗಳು ಯಶಸ್ವಿಯಾಗಿ ಪೂರ್ಣವಾಗಲು ನೆರವಾಗಬೇಕಾಗಿ ಕೋರುತ್ತೇವೆ.

ವಿ.ಸೂ. ಭವ್ಯ ಸ್ಮಾರಕಗಳ ಚಿತ್ರವನ್ನು ಹಿಂಬದಿ ಪುಟದಲ್ಲಿ ನೋಡಿ. ಈ ಬೃಹತ್ ಕಟ್ಟಡಗಳನ್ನು ಪ್ರತ್ಯಕ್ಷವಾಗಿ ನೋಡಿದಾಗ ಧನ್ಯತೆ ಮೂಡಿಸಿ ಮೂಕ ವಿಸ್ಮಿತರನ್ನಾಗಿ ಮಾಡಿ ಶ್ರೀ ಶ್ರೀ ಗಳವರ ಮಹಾನ್ ವ್ಯಕ್ತಿತ್ವದ ಜೀವನದರ್ಶನವನ್ನು ವಿಮರ್ಶೆಗೆ ಒಳಪಡಿಸುತ್ತದೆ.

**ಪದ್ಮಭೂಷಣ ಡಾ. ಎಂ.ಸಿ. ಮೋದಿ,**
ಅಧ್ಯಕ್ಷರು.

**ಬಿ.ಎಸ್. ಮುದ್ದಪ್ಪ** ಐ.ಎ.ಎಸ್.(ರಿ),
ಕಾರ್ಯಾಧ್ಯಕ್ಷರು.

**ಎಸ್. ಎಸ್. ಹಸಬಿ,** ಐ.ಪಿ.ಎಸ್. (ರಿ),
ಕಾರ್ಯದರ್ಶಿಗಳು.

# ಸಿದ್ಧಗಂಗಾ

ಸಂಪುಟ-31 ಸಂಚಿಕೆ-9 ಸೆಪ್ಟೆಂಬರ್-1995

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹೊತ್ತು ಹೋಗದಮುನ್ನ ಹೊತ್ತರಿದು ನಡೆಯೆಂದೆ
ಮೃತ್ಯುಮುಟ್ಟದ ಮುನ್ನ ಬಾಳೆಂದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಏನ ಹೇಳುವೆನಪ್ಪಾ ಏನೆಂತು ಹೇಳಲಿ॥
ನನ್ನ ಶ್ರೀಗುರುವಿನ ಶ್ರೀಇರವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಅನುಭಾವ ದೀಪ್ತಿಯೇ ನೆಲದ ಕೈಲಾಸವೆ
ಜಗದ ಕಲ್ಯಾಣವೆ ಶ್ರೀ ಗುರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
| --- | --- | --- |

# ಶ್ರೀವಾಣಿ



ವ್ಯಕ್ತಿಯ ನಡೆನುಡಿಗಳ, ಚಿಂತನ-ಮಂಥನಗಳ, ದುಡಿತ-ಮಡಿತಗಳ ಒಟ್ಟು ಮೊತ್ತವೇ ವ್ಯಕ್ತಿತ್ವ. ವ್ಯಕ್ತಿ ಅಳಿದ ಮೇಲೂ ಉಳಿಯುವ ಸತ್ವವೇ ವ್ಯಕ್ತಿತ್ವ. ರೂಪಣದಲ್ಲಿ ಹಲವಾರು ಶಕ್ತಿಗಳ ಸಹಾಯ ಸಹಕಾರ ಲಭ್ಯವಾಗಿರುತ್ತದೆ. ವ್ಯಕ್ತಿಯಿಂದ ವ್ಯಕ್ತಿತ್ವವಾದರೂ ವ್ಯಕ್ತಿತ್ವದಿಂದಾಗುವ ಪ್ರಯೋಜನ ದೊಡ್ಡದು. ವ್ಯಕ್ತಿತ್ವ ನಿರ್ಮಾಣದಲ್ಲ ಧರ್ಮದ ಪಾತ್ರವೂ ಇರುತ್ತದೆ; ಎಲ್ಲಕ್ಕಿಂತ ಮಹತ್ವಪೂರ್ಣವಾಗಿರುತ್ತದೆ. ಮಹಾಪುರುಷರ ವ್ಯಕ್ತಿತ್ವ ನಿರ್ಮಾಣದಲ್ಲಿ ಅವರನ್ನು ಸಾಕಿ ಸಲಹಿದ, ಸುಖ ದುಃಖಗಳಲ್ಲಿ ಭಾಗಿಗಳಾದ, ಓರೆ-ಕೋರೆಗಳನ್ನು ತಿದ್ದಿದ, ಬೇಕು-ಬೇಡಗಳನ್ನು ಗಮನಿಸಿದ, ಪರಮಹಿತಕ್ಕಾಗಿ ದುಡಿಯುವಂತೆ ಪ್ರಚೋದಿಸಿದ ಹಲವು ಹನ್ನೊಂದು ಆತ್ಮೀಯ "ಮನಸ್ಸು" ಗಳು ಸಹಕರಿಸಿರುವುದನ್ನು ಗಮನಿಸಬಹುದು. ಅಂತಹ ಆತ್ಮೀಯ "ಮನಸ್ಸು" ಗಳು ತಾಯಿಯಾಗಿರಬಹುದು, ಒಡಹುಟ್ಟಿದವರಾಗಿರಬಹುದು ಮಡದಿಯಾಗಿರಬಹುದು, ಗೆಳೆಯನಾಗಿರಬಹುದು, ಗುರುವಾಗಿರಬಹುದು, ಸೇವಕನಾಗಿರಬಹುದು, ಒಂದು ಗ್ರಂಥವಾಗಿರಬಹುದು. ವಾಲ್ಮೀಕಿಯ ವ್ಯಕ್ತಿತ್ವ ಅರಳಲು ಕಾರಣರಾದವರು ಯಾರು? ಕಾಳಿದಾಸನು ಪ್ರಕಾಶಕ್ಕೆ ಬರಲು ಯಾರು ಕಾರಣ ? ಮಹಾತ್ಮ ಗಾಂಧೀಜಿಯ ಜೀವನದಲ್ಲಿ ಅವರ ಧರ್ಮಪತ್ನಿ ವಹಿಸಿದ ಪಾತ್ರವೆಂಥದು ? ಲಾಲ್ ಬಹಾದ್ದೂರ್‌ಶಾಸ್ತ್ರಿಗಳ ಸರಳ ಸುಂದರ ಪ್ರಾಮಾಣಿಕ ಬದುಕಿಗೆ ಕೈಗೂಡಿಸಿದವರಾರು? ವಿಶ್ವೇಶ್ವರಯ್ಯನವರ ವ್ಯಕ್ತಿತ್ವದ ಹಿಂದೆ ನಿಂತು ಆಶೀರ್ವದಿಸಿದ ಶಕ್ತಿ ಯಾವುದು ? ಬಸವಣ್ಣನವರ ವ್ಯಕ್ತಿತ್ವಕ್ಕೊದಗಿ ಬಂದ ಅಕ್ಕನಾಗಲಾಂಬಿಕೆಯ ಸೇವಾನಿಷ್ಠೆ ಹೇಗಿತ್ತು? ಎಲ್ಲವನ್ನು ಮನವರಿಕೆ ಮಾಡಿಕೊಂಡಾಗ ವ್ಯಕ್ತಿತ್ವ ನಿರ್ಮಾಣದಲ್ಲಿ "ಸ್ವ-ಪರ" ದುಡಿಮೆಗಳ ಮೊತ್ತವನ್ನು ಪರಿಗಣಿಸಬೇಕಾದೀತು. ಧರ್ಮವನ್ನು ಕೇವಲ ಬಾಹ್ಯಾಡಂಬರಗಳಿಗೆ ಸಂಕುಚಿತಗೊಳಿಸುವ ಪ್ರವೃತ್ತಿ ಇಂದು ಕಾಣುತ್ತಿದೆ. ಧರ್ಮ ಕೂಡಿ ಬದುಕುವುದನ್ನು, ತಾನು ಮರೆಯಲ್ಲಿ ನಿಂತು ಇನ್ನೊಬ್ಬನನ್ನು ಲೋಕಕ್ಕೆ ತೋರಿಸುವ ಕೆಲಸ ಮಾಡುವ ಜೀವನವಿಧಾನ. ಅದೊಂದು Way of Life ತಾನು ಬದುಕ ಬೇಕು ಎಂಬುದಕ್ಕಿಂತ ಇನ್ನೊಬ್ಬನು ಬದುಕಲು ಅವಕಾಶ ಕಲ್ಪಿಸಿ ಕೊಡುವುದು ಧರ್ಮ. ತಾನು ಮಾಡುವುದಕ್ಕೆ ಅಥವಾ ನೀಡುವುದಕ್ಕೆ ಬದಲಾಗಿ ಮತ್ತೇನನ್ನೂ ಅಪೇಕ್ಷಿಸುವುದಿಲ್ಲ ಧರ್ಮ. ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡುವುದೇ, ಹಾರೈಸುವುದೇ ಧರ್ಮ. ವ್ಯಕ್ತಿ ನುಡಿದು ನಡೆದು ತೋರಿಸುವ ಪ್ರಾಮಾಣಿಕ ನಿಸ್ವಾರ್ಥ ಜೀವನ ವಿಧಾನವೇ ಧರ್ಮ. ವ್ಯಕ್ತಿಯ ವ್ಯಕ್ತಿತ್ವ ಅರಳಲು ಕ್ರಿಯಾ ಶೀಲವಾಗಲು ಕಾರಣವಾಗುವುದೇ ಧರ್ಮ. ಧರ್ಮ ಕೇವಲ ಲಾಂಛನಗಳಿಂದ, ಆಡಂಬರ ವರ್ತನೆ, ವ್ಯವಹಾರಗಳಿಂದ ಕೂಡಿದುದಲ್ಲ. ಅಂಧ ಶ್ರದ್ಧೆಯೇ ಧರ್ಮವಲ್ಲ, ಧರ್ಮವೆಲ್ಲವೂ ಅಂಧ ಶ್ರದ್ಧೆಯಲ್ಲ. ಮಾನವೀಯತೆಯ ಆರಾಧನೆ ಆಚರಣೆಗಳೆಲ್ಲ ವ್ಯಕ್ತಿತ್ವವೇ ಮಾನವೀಯತೆಯನ್ನು ಪ್ರತಿಪಾದಿಸುವುದೇ ಧರ್ಮ.

# ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ, ತುಮಕೂರು

---

ಬೆಂಗಳೂರಿನ ನ್ಯಾಷನಲ್ ಏರೋಸ್ಪೇಸ್‌ಲ್ಯಾಬರೊಟರೀಸ್‌ರವರು ಅಭಿವೃದ್ಧಿ ಪಡಿಸಿರುವ ಸ್ಟ್ರಕ್ಚರಲ್ ಅನಾಲಿಸಿಸ್‌ಗೆ ಉಪಯೋಗವಾಗುವ ಫೈನೆಟ್ ಎಲಿಮೆಂಟ್ ಪ್ಯಾಕೇಜ್ [FEPAKS]ನ್ನು ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯ ಪಡೆದಿರುತ್ತದೆ.

ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯವು ಎನ್.ಎ.ಲ್ ನವರು ಸಿದ್ಧಪಡಿಸಿರುವ ಈ ಸಾಫ್ಟ್ ವೇರ್ ಉಪಕರಣವನ್ನು ಹೊಂದಿರುವ ದೇಶದಲ್ಲೇ ಮೊದಲನೆಯ ವಿದ್ಯಾಸಂಸ್ಥೆಯಾಗಿದೆ.

ವಿಜ್ಞಾನಿಗಳಾದ ಡಾ|| ಜಿ. ಪ್ರತಾಪ್ ಹಾಗೂ ಡಾ|| ಬಿ.ಪಿ. ನಾಗನಾರಾಯಣರವರುಗಳು ಎಸ್.ಐ.ಟಿ. ಯಲ್ಲಿ ಈ ಸಾಫ್ಟವೇರ್‌ಗೆ ಸಂಬಂಧಿಸಿದ ತತ್ವಗಳ ಬಗ್ಗೆ ಹಾಗೂ ಅದರ ಉಪಯೋಗದ ಬಗ್ಗೆ ವ್ಯಾಪಕ ರೀತಿಯಲ್ಲಿ ಒಂದುವಾರ ಪರ್ಯಂತ ಕಾರ್ಯಾಗಾರವನ್ನು ನಡೆಸಿ ಕೊಟ್ಟಿರುತ್ತಾರೆ.

ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯವು ಈಗ ಸಿವಿಲ್, ಮೆಕ್ಯಾನಿಕಲ್, ಆಟೋಮೊಬೈಲ್, ಏರೋನಾಟಿಕಲ್ ಹಾಗೂ ಓಪನ್ ಇಂಜನಿಯರಿಂಗ್ ವಿಭಾಗಗಳಿಗೆ ಸಂಬಂಧಿಸಿದಂತೆ ಅತ್ಯಾಧುನಿಕ ವಿನ್ಯಾಸಗಳು ಸಲಹೆ, ಪ್ರಾಜೆಕ್ಟುಗಳ ವಿಚಾರ ವಿನಿಮಯ, ಶಿಕ್ಷಣ ಹಾಗೂ ಸಂಶೋಧನೆಗಳನ್ನು ನಿಭಾಯಿಸಲು ಸಮರ್ಥವಾಗಿದೆ.

–ಡಾ || ಎಂ. ಎನ್ ಚನ್ನಬಸಪ್ಪ, ಪ್ರಾಂಶುಪಾಲರು.

---

ಬರಿಯ ವಸ್ತು ಸಂಗತಿಗಳ ಅಥವಾ ತಾಂತ್ರಿಕ ಕೌಶಲ್ಯಗಳ ಜ್ಞಾನ್ಮೆಯನ್ನು ಸಂಪಾದಿಸುವುದಷ್ಟೇ ಶಿಕ್ಷಣದ ಗುರಿಯಲ್ಲ. ಜ್ಞಾನ್ಮೆ ಹಾಗೂ ಕೌಶಲ್ಯಗಳನ್ನು ಮೀರಿದ ದೃಷ್ಟಿ ಕೋನವಿದೆ. ನಾವು ಅದನ್ನು ಶಿಕ್ಷಣದ ಮೂಲಕ ಸಂಪಾದಿಸಬೇಕು.

–ಡಾ. ರಾಧಾಕೃಷ್ಣನ್.



## ಶ್ರೀ ಸಿದ್ಧಲಿಂಗೇಶ್ವರ ವಚನ

ಚಿಲುಮೆಯ ಅಗ್ಘವಣಿಯ ಕುಡಿದರೇನೋ
ಜನ್ಮದ ವೈಲಿಗೆಯ ತೊಳೆಯದನ್ನಕ್ಕರ?
ಕಾಡುಗಟ್ಟೆಯ ನೀರ ಕುಡಿದರೇನೋ
ತನ್ನ ಕಾಡುವ ಕರಣಾದಿ ಗುಣಂಗಳ ಕೆಳೆದುಳಿಯದನ್ನಕ್ಕರ?
ಉಳ್ಳಿನುಗ್ಗೆಯ ಬಿಟ್ಟರೇನೋ
ಸಂಸಾರದ ಸೊಕ್ಕಿನುಕ್ಕ ಮರುದು
ಮಾಯಾ ದುರ್ವಾಸನೆಯ ವಿಸರ್ಜಿಸದನ್ನಕ್ಕರ?
ಸಪ್ಪೆಯ ನುಂಡರೇನೋ
ಸ್ತ್ರೀಯರ ಅಪ್ಪುಗೆ ಬಿಡದನ್ನಕ್ಕರ?
ಅದೇತರ ಶೀಲ ಆದೇತರ ವ್ರತ ಮರುಳೆ?
ಅಂಗವಾಚಾರ ಲಿಂಗವಾಗಿ
ಮನವು ಅರಿವು ಸಂಬಂಧವಾಗಿ
ಸರ್ವದುರ್ಭಾವ ಚರಿತ್ರವೆಲ್ಲಾ ಕೆಟ್ಟು
ಸತ್ಯ ಸದ್ಭಾವ ನೆಲೆಗೊಂಡ ಸದ್ಭಕ್ತನ ಶೀಲಕ್ಕೆ
ನಮೋನಮೋಯೆಂಬೆನು ಕಾಣಾ!
ಮಹಾಲಿಂಗಗುರು ಶಿವ ಶಿದ್ದೇಶ್ವರ ಪ್ರಭುವೇ!

ಈ ವಚನದಲ್ಲಿ ನಿಜವಾದ ಶೀಲದ ಗುಟ್ಟನ್ನು ಇನ್ನಷ್ಟು ವಿಸ್ತರಿಸಿ ಅಂತಹ ಶೀಲ ಸಂಪನ್ನರಾದ ಸದ್ಭಕ್ತರು ಎಂಥ ಪೂಜ್ಯ ವ್ಯಕ್ತಿಗಳಾಗುವರೆಂಬುದನ್ನು ತೋರಿಸಲಾಗಿದೆ.

[ಕೃಪೆ :- ತೋಂಟದ ಶ್ರೀ ಸಿದ್ಧಲಿಂಗೇಶ್ವರರು ನಿರೂಪಿಸಿದ "ಷಟ್‌ಸ್ಥಲ ಜ್ಞಾನ ಸಾರಾಮೃತ" ಪ್ರಕಟಣೆ-: ಶ್ರೀ. ತೋಂ.ಸಿ.ಕೈಂ. ಸೇ.ಸಂ. ಎಡೆಯೂರು-ಗದಗ]

## ಸಿದ್ಧಗಂಗಾ ಮಾಸ ಪತ್ರಿಕೆ



### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 31ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---


" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.


---


ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

## ಶಿವ ಚಿಂತನ ಗೋಷ್ಠಿ

ಶ್ರೀ ಮಠದಲ್ಲಿ ನಾಡಿನ ವಿವಿಧ ಮಠಗಳಿಂದ ಬಂದ ವಟುಗಳಿದ್ದಾರೆ. ಸಂಸ್ಕೃತ ವ್ಯಾಸಂಗ ಮಾಡುತ್ತಿದ್ದಾರೆ. ಜತೆಯಲ್ಲಿಯೇ ಧಾರ್ಮಿಕ ಲೌಕಿಕ ಶಿಕ್ಷಣಾರ್ಥಿಗಳೂ ಆಗಿದ್ದಾರೆ. ಪ್ರೌಢಶಾಲೆಯಿಂದ ಸ್ನಾತಕೋತ್ತರ ತರಗತಿಯವರೆಗೂ ಅಭ್ಯಾಸ ನಡೆಸಿರುವವರಿದ್ದಾರೆ. ವಿವಿಧ ಮಠಗಳಿಗೆ ಉತ್ತರಾಧಿಕಾರಿಗಳಾಗಿ ನಿಯೋಜಿತರಾಗಿದ್ದಾರೆ. ಶ್ರೀ ಕ್ಷೇತ್ರದಲ್ಲಿ ನಡೆಯುತ್ತಿರುವ ಧಾರ್ಮಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕಾರ್ಯಕ್ರಮಗಳೆಲ್ಲದರಲ್ಲಿ ಭಾಗಿಗಳಾಗುವ ಅವಕಾಶ ಪಡೆದಿದ್ದಾರೆ. ಭಿನ್ನ ಭಿನ್ನ ಪರಿಸರದಿಂದ ಬಂದವರಾಗಿದ್ದರೂ ಒಂದು ಘನ ಉದ್ದೇಶಕ್ಕೆ ನಿಯೋಜಿತರಾಗಿದ್ದಾರೆ. ಸೇವಾ ಜೀವನಕ್ಕೆ ತಮ್ಮನ್ನು ಅರ್ಪಿಸಿಕೊಂಡವರಾಗಿ ಎದುರಾಗುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ತರಬೇತಿಯನ್ನು ಪಡೆಯುವ ಹಂತದಲ್ಲಿದ್ದಾರೆ. ಸಮಾಜ ತಮ್ಮಿಂದ ನಿರೀಕ್ಷಿಸುವ ಸೇವೆಗಾಗಿ ಸಿದ್ಧವಾಗುತ್ತಿದ್ದಾರೆ. ಧರ್ಮಾಧಿಕಾರಿಗಳಾಗುವವರಾದ್ದರಿಂದ ಧಾರ್ಮಿಕ ವಿಧಿ, ವಿಧಾನಗಳನ್ನು, ಆಚಾರ–ವಿಚಾರಗಳನ್ನು ಮೈಗೂಡಿಸಿಕೊಳ್ಳುತ್ತಿದ್ದಾರೆ. ಸಮಾಜದಲ್ಲಿ ಹಲವು ಹನ್ನೊಂದು ಮೌಢ್ಯಗಳು ಹೆಪ್ಪುಗಟ್ಟಿರುವುದನ್ನು, ಅವುಗಳ ನಿವಾರಣೋಪಾಯಗಳನ್ನು ವ್ಯಾಸಂಗದ ಮೂಲಕ, ವಿದ್ವಾಂಸರಿಂದ ತಿಳಿಯುವುದರ ಮುಖೇನ ತಿಳಿದುಕೊಳ್ಳುತ್ತಿದ್ದಾರೆ. ಮುಂಜಾನೆಯಿಂದ ಸಂಜೆಯವರೆಗೆ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ನಡೆಸಿರುವ ಸೇವಾ ಮಣಿಹ, ದಾಸೋಹ ವೈಭವ, ಭಕ್ತಾದಿಗಳ ಕುಂದು-ಕೊರತೆಗಳ ಪರಾಮರ್ಶೆ, ವಿದ್ಯಾರ್ಥಿಗಳ ಯೋಗಕ್ಷೇಮ, ಕಾಯಕತಪಸ್ಸು, ರಾಷ್ಟ್ರಚಿಂತನೆಗಳನ್ನು ಕಣ್ಣಾರೆ ಕಾಣುವ ಭಾಗ್ಯಶೀಲರಾಗಿದ್ದಾರೆ "ಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯಪ್ಪಂತೆ" ಬೆಳೆಯುತ್ತಿದ್ದಾರೆ. ಶ್ರೀ ಸಿದ್ಧಗಂಗಾ ಮಠ ವಿರಕ್ತ ಮಠವಾದರೂ ಪಟ್ಟದ ಮಠಗಳ ವಟುಗಳನ್ನು ಸಂರಕ್ಷಿಸುತ್ತಿದ್ದು ಅವರ ಉತ್ತರೋತ್ತರ ಅಭಿವೃದ್ಧಿಗಾಗಿ ಶ್ರಮಿಸುತ್ತಿದೆ.

ಪ್ರತಿ ಭಾನುವಾರ ಶಿವಚಿಂತನ ಗೋಷ್ಠಿ ನಡೆಯುತ್ತದೆ. ಧಾರ್ಮಿಕ ಸಿದ್ಧಾಂತ ಮತ್ತು ಸಾಹಿತ್ಯವನ್ನು ಕುರಿತು ವಟುಗಳು ಮಾತನಾಡುವ ವ್ಯವಸ್ಥೆಯಿದೆ. ಶ್ರೀ ಮಠದ ಉತ್ತರಾಧಿಕಾರಿಗಳಾಗಿರುವ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು

ನೇತೃತ್ವ ವಹಿಸುತ್ತಾರೆ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಶರಣರ ಜೀವನ ಸಂದೇಶ, ವಿವಿಧ ಧರ್ಮಗಳ ಸೂಕ್ಷ್ಮ ಪರಿಚಯ, ಮಠಗಳು ಬೆಳೆದು ಬಂದ ಬಗೆ, ಅವುಗಳ ಮೂಲ ಉದ್ದೇಶ, ಸಮಾಜದಲ್ಲಿ ಕಂಡು ಬರುವ ಮೂಢನಂಬಿಕೆಗಳು, ವಿವಿಧ ಆಚಾರ ವಿಚಾರ, ಇತ್ಯಾದಿಗಳನ್ನು ಕುರಿತು ಉಪನ್ಯಾಸ ಮಾಡುವುದನ್ನು ಕಲಿಸಲಾಗುತ್ತದೆ. ವಟುಗಳ ಜತೆಗೆ ಆಸಕ್ತರೂ, ಶಿಕ್ಷಕರು, ವಿದ್ಯಾರ್ಥಿಗಳು ಸಮಾವೇಶಗೊಳ್ಳುತ್ತಾರೆ. ವಿಷಯದಲ್ಲಿ ಆಳವಾದ ಅನುಭವವಿರುವ ಹಿರಿಯರು ಮಾರ್ಗದರ್ಶನ ಮಾಡುತ್ತಾರೆ. ನಿಯೋಜಿತ ರೀತಿಯಲ್ಲಿ ಚಿಂತನ ಗೋಷ್ಠಿ ನಡೆಯುತ್ತದೆ ಶರಣ ಧರ್ಮದ ಸಾಕಾರ ಸ್ವರೂಪಿಗಳಾದ, ಮಾನವೀಯತೆಯ ಮಂಗಳಾಕಾರರಾದ ಪರಮ ಪೂಜ್ಯ ಶ್ರೀ ಶ್ರೀಗಳವರು ಮೇಲ್ವಿಚಾರಣೆ ನಡೆಸುವುದರ ರೀತಿಯಲ್ಲಿ ವಟುಗಳು ಬೆಳೆಯಬೇಕಾದ ದಿಕ್ಕು ದೆಸೆಗಳನ್ನು ಸೂಚಿಸುತ್ತಾರೆ. ಆಗಾಗ ಕೆಲವರನ್ನು ಪರಾಮರ್ಶೆಗೊಳಗು ಪಡಿಸುತ್ತಾರೆ.

ಇಂದಿನ ಆಧುನಿಕ **ಸಮಾಜ** 'ಸ್ವಾಮಿಗಳಾಗುವವರನ್ನು ಅತ್ಯಂತ ಕುತೂಹಲ ದೃಷ್ಟಿಯಿಂದ, ಪರೀಕ್ಷಕ ಕಣ್ಣುಗಳಿಂದ ನಿರೀಕ್ಷಿಸುವುದಾಗಿದೆ. 'ಹತ್ತು ನಿಮಿಷ ಸಭೆ ಸಮಾರಂಭಗಳಲ್ಲಿ ನಿರ್ಭಯವಾಗಿ, ಪ್ರಭುತ್ವ ಪೂರ್ಣವಾಗಿ ಮಾತನಾಡುವ ಶಕ್ತಿ ಸಾಮರ್ಥ್ಯಗಳನ್ನು, ನಿಷ್ಕಳಂಕವಾದ ಚಾರಿತ್ರ ಶುದ್ಧಿಯನ್ನು, ನಿಸ್ವಾರ್ಥ ಸೇವಾ ಮನೋಧರ್ಮವನ್ನು, ಆಚಾರನಿಷ್ಠೆ ವಿಚಾರ ಶುದ್ಧಿಗಳ ಸಾಮರಸ್ಯವನ್ನು ಕಾಯಕ ದೀಕ್ಷೆಯನ್ನು, ಸರಳ ಜೀವನವನ್ನು ಸ್ವಾಮಿಗಳಿಂದ ಅಪೇಕ್ಷಿಸುತ್ತದೆ ಸಮಾಜ. ಸ್ವಾಮಿಗಳು ವಿದ್ಯಾವಂತರಾಗಿರಬೇಕು. ಲೌಕಿಕ ಧಾರ್ಮಿಕ ವಿಚಾರಗಳ ತಿಳಿವಳಿಕೆಯುಳ್ಳವರಾಗಿರಬೇಕು. ಸೇವಾ ನಿಷ್ಠರಾಗಿರಬೇಕೆಂದು ನಿರೀಕ್ಷಿಸುವುದು ಸಹಜ. ಯಾರಿಗೇ ಆದರೂ ದೈಹಿಕ ಶ್ರಮ ಬೇಕೇ ಬೇಕು. ಅದರಲ್ಲೂ ಶಿವಯೋಗಿಗಳಾಗ ಬಯಸುವವರು ದೇಹವನ್ನು ದುಡಿಮೆಗೆ ಹಚ್ಚಬೇಕು, ಹಗಲು ನಿದ್ದೆ ಮಾಡಬಾರದು, ಅಧ್ಯಯನ ಸಂಪನ್ನರಾಗ ಬೇಕು. ದೀನಾನಾಥರನ್ನು ಕಂಡಾಗ ಕೈಹಿಡಿದೆತ್ತುವ ಮನಸ್ಸುಳ್ಳವರಾಗಬೇಕು, ತಾವು ಪ್ರತಿನಿಧಿಸುವ ಸಂಸ್ಥೆಯ ಇತಿಹಾಸ ಬಲ್ಲವರಾಗಬೇಕು. ಅಂಥ ಸಂಸ್ಥೆಯ ಬೆಳವಣಿಗೆಯಲ್ಲಿ ತಮ್ಮ ಬೆಳವಣಿಗೆಯೂ ಇದೆ ಎಂಬುದನ್ನು ಮನಗಂಡು ಮುಂದುವರಿಯ ಬೇಕು ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀಗಳವರು ಶ್ರೀ ಮಠದಲ್ಲಿರುವ ವಟುಗಳಿಗೆ ಸಮಯ ಸಂದರ್ಭಗಳು ಸಿಕ್ಕಾಗ ಆತ್ಮೀಯವಾಗಿ ಉಪದೇಶಿಸುತ್ತಾರೆ."ಕಡಿಹಕ್ಕೆ ಬಡಿಹಕ್ಕೆ ತಂದು ಕಡೆಯಾಣಿಯ" ಮಾಡಿ ಸಮಾಜಕ್ಕೆ ನೀಡುತ್ತಾರೆ.

# "ಶಿವ ಶರಣರ ದೃಷ್ಟಿಯಲ್ಲಿ ಕಾಯಕ ಪ್ರಜ್ಞೆ"

–ಎಸ್. ವಿಶ್ವನಾಥ, ಮುನವಳ್ಳಿ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-580 003.

ಕಾಯಕ ತತ್ವ ಶರಣರು ಜಗತ್ತಿಗಿತ್ತ ಅಪೂರ್ವ ಕಾಣಿಕೆ. ಸಮಾಜದಲ್ಲಿ ಸಾಮೂಹಿಕವಾಗಿ ಕಾಯಕತತ್ವವನ್ನಾಚರಿಸಿದರೂ ಸಮತೆಯನ್ನು ಸಾಧಿಸಿದ್ದು ಶರಣ ಧರ್ಮದಲ್ಲಿ ಮಾತ್ರ. ಇದು ವ್ಯಷ್ಟಿ-ಸಮಷ್ಟಿ ಇಹಪರಗಳೆರಡನ್ನು ಬಂಧಿಸಿರುವ ಮಹಾಸೇತುವೆ.

ಈ ಭೂಮಿಯ ಮೇಲೆ ಜನಿಸಿದ ಪ್ರತಿಯೊಬ್ಬ ಮನುಷ್ಯನು ತನ್ನ ಜೀವನೋಪಾಯಕ್ಕಾಗಿ ಒಂದು ಉದ್ಯೋಗ ಕೈಕೊಳ್ಳುತ್ತಾನೆ. ಆದರಿಂದ ಅವನು ತನ್ನ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುತ್ತಾನೆ. ಸಮಾಜ ಜೀವಿಯಗಿ ಬದುಕುವ ಪ್ರತಿಯೊಬ್ಬರಿಗೂ ಒಂದು ಉದ್ಯೋಗ ಬೇಕೆ ಬೇಕು. ಈ ಉದ್ಯೋಗವನ್ನು ಶರಣರು 'ಕಾಯಕ' ಎಂದು ಕರೆದಿರುವುದು. ಆದರೆ ಶರಣರ ದೃಷ್ಟಿಯಲ್ಲಿ ಕಾಯಕಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಯಾವ ಉದ್ಯೋಗವೇ ಆಗಲಿ ಅದು ಕಾಯಕವೆನಿಸುವುದು. ಅದನ್ನು ಸ್ವಹಿತ ಮತ್ತು ಪರಹಿತಕ್ಕಾಗಿ ಬಳಸಿಕೊಂಡಾಗ ಮಾತ್ರ ಸಮಾಜಕ್ಕೆ ಇಲ್ಲವೇ ಒಬ್ಬ ವ್ಯಕ್ತಿಗೆ ಹಾನಿ ಆಗುವಂತಿದ್ದರೆ ಆದು ಕಾಯಕವಾಗಲಾರದು.

ಪ್ರತಿಯೊಬ್ಬ ಮನುಷ್ಯನು ಒಂದಲ್ಲೊಂದು ಕಾಯಕ ಕೈಕೊಂಡು ಅದರಲ್ಲಿ ಕೈಲಾಸ ಕಾಣಬೇಕೆಂಬುದನ್ನು ಬಸವಣ್ಣನವರು "ಕಾಯಕವೇ ಕೈಲಾಸ" Work is Work ship ಎಂದು ಸಾರಿ ಪ್ರತಿಯೊಬ್ಬರು ಜಾತಿ, ಕುಲ, ಭೇದಗಳನ್ನು ತೊರೆದು ಕಾಯಕಕ್ಕೆ ತೊಡಗಬೇಕು ಅಂದಾಗ ಸಮಾಜವನ್ನು ಸಮತಾವಾದದ ತಳಹದಿಯ ಮೇಲೆ ಕಟ್ಟಲು ಸಾಧ್ಯ. ಶರಣರ ದೃಷ್ಟಿಯಲ್ಲಿ ಜಾತಿ ಕುಲದಲ್ಲಿ ಮೇಲು ಕೀಳೆಂಬ ಭೇದವೇ ಇಲ್ಲ.

ಬಸವಾದಿ ಶರಣರು ಈ ದುರ್ಭಾವವನ್ನು ತೊಡೆದು ಹಾಕಿ ಕಾಯಕ ಗೌರವ ಹಾಗೂ ಕಾಯಕ ದೈವತ್ವಗಳನ್ನು ತಂದಿತ್ತರು. ಮಾನವ ಒಂದೇ ಒಲಂ ಎಂದು ಆದಿ ಕನ್ನಡ ಕವಿ ಪಂಪನ ಮಾತು ಸರ್ವಕಾಲಕ್ಕೂ ಸತ್ಯ, ವಿಮರ್ಶಕರೊಬ್ಬರು ಹೀಗೆ Mark taeght dignity of Labour but Basava taught both Dignity and Divinity of labour (ಮಾರ್ಕ್ಸನು ಕಾಯಕ ಗೌರವ ಬೋಧಿಸಿದರೆ ಬಸವಣ್ಣನು ಕಾಯಕ ಗೌರವ ಹಾಗೂ ಕಾಯಕ ದೈವತ್ವ ಬೋಧಿಸಿದನು).

ಕಾಯಕ ಕೇವಲ ಉಪ ಜೀವನವಷ್ಟಕ್ಕೆ ಅಲ್ಲ. ಅದು ಧಾರ್ಮಿಕ, ಆಧ್ಯಾತ್ಮಿಕ ಬದುಕಿನ ಮೌಲ್ಯವೂ ಹೌದು.

"ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು, ನಾನು ವ್ಯವಹಾರ
ಮಾಡುವೆನಯ್ಯ ಲಿಂಗಾರ್ಚನೆಗೆಂದು, ನಾನು ಪರಸೇವೆಯ ಮಾಡುವೆನಯ್ಯ
ಜಂಗಮದಾಸೋಹಕೆಂದು, ಶರಣರು ಬೋಧಿಸಿದ ತತ್ವ ಕಾಯಕವೇ
ಕೈಲಾಸದಂತಿದೆ.

ಶರಣರ ದೃಷ್ಟಿಯಲ್ಲಿ ಕಾಯಕವು ಅದು ಸತ್ಯ ಶುದ್ಧವಾಗಿರಬೇಕೆಂದು ನುಡಿಯುತ್ತಾ ಸತ್ಯವೇ ದೇವರು, ದೇವರೇ ಸತ್ಯ-ಸತ್ವಸ್ವರೂಪ ವೆಂದರೆ ತ್ರಿಕಾಲದಲ್ಲಿ ಅಭಿದಿತವಾದ ಜೈತನ್ಯವು ಮತ್ತು ಸತ್ಯವೆಂದರೆ ಇದ್ದಕಿದ್ದ ಹಾಗೆ ನ್ಯಾಯಾರ್ಜಿತ ಧನವನ್ನು ಸಂಗ್ರಹಿಸಿ ದೇವರನ್ನು ಮುಂದಿಟ್ಟುಕೊಂಡು ಆಚರಿಸುವ ಕೇವಲ ಧರ್ಮಮೂರ್ತಿ ಇನ್ನೂ ಶುದ್ಧವೆಂದರೆ-ಕಾಯಾ, ವಾಚಾ, ಮನಸಾ, ಇತರರಿಗೆ ಇದು ಬಾಧಕವಾಗದಂತೆ ಸಂಪಾದಿಸುವುದೇ ಕಾಯಕ ಧರ್ಮ.

ಕಾಯಕದಲ್ಲಿ ನಿರತನಾದರೆ, ಗುರುದರ್ಶನವಾದರೂ ಮರೆಯಬೇಕು.
ಲಿಂಗಪೂಜೆಯಾದರೂ ಮರೆಯಬೇಕು, ಜಂಗಮ ಮುಂದಿದ್ದರೂ
ಹಂಗು ಹರಿಯಬೇಕು, ಕಾಯಕವೇ ಕೈಲಾಸವಾದರೆ ಕಾಯಕ
ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು
ಆಯ್ದಕ್ಕಿ ಮಾರಯ್ಯನ ಮಾತು ಈ ಕಾಯಕದಲ್ಲಿ ನಿರತನಾದಾಗ
ಬಾಹ್ಯರಂಗಕ್ಕೆ ಒಳಗಾಗಬಾರದೆಂಬುದು ತಿಳಿಸುವುದು.

"ತನು ಶುದ್ಧಿಲ್ಲದವರಿಗೆ ದೈವದ ಬಡತನವಲ್ಲದೇ
ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತರಿಗೆ ಎತ್ತ
ನೋಡಿದತ್ತ ಲಕ್ಷ್ಮೀತಾನಾಗಿಪ್ಪಳು, ಮಾರಯ್ಯ ಪ್ರಿಯ
ಅಮರೇಶ್ವರಲಿಂಗದ ಸೇವೆಯುಳ್ಳನ್ನಕ್ಕ (ಶೂನ್ಯ ಸಂಪಾದನೆ)
ದುರ್ಗುಣ ದುರ್ನಡತೆಗಳಿಂದ ಕೂಡಿದ ದುರಾಚಾರಿ (ತನು ಶುದ್ಧವಿಲ್ಲದ)
ಗೆ ದ್ರವ್ಯದ ಬಡತನ, ಸತ್ಯ ಶುದ್ಧ ಕಾಯಕ ಮಾಡುವ ಶರಣಗೆ ಸದಾ
ಸಂತೃಪ್ತಿಯ ಸಿರಿವಂತಿಕೆ ಇಂತು ಕಾಯಕ ತತ್ವದಿಂದ ಹಣದ ಗಳಿಕೆ
ಯಾಗಬೇಕು.

ಶುದ್ಧ ಕಾಯಕವಂತನಾಗಿ ಜೀವನ ಸಾಗಿಸುವಾಗ ಗರ್ವ ಸಲ್ಲದು, ತಾ ಮಾಡುವೆನೆಂಬ ಹೆಮ್ಮೆ ಇರಕೂಡದು. "ಮಾಡಿದನೆಂಬುದು ಮನದಲ್ಲಿ ಹೊಳೆದರೆ ಏಡಿಸಿಕಾಡಿತ್ತು ಶಿವನ ಡಂಗುರ" ಕಾರಣ ನಾ ಮಾಡಿದನೆಂಬುದು ಮನದಲ್ಲೂ ಕೂಡ ಹೊಳೆಯಬಾರದೆಂಬುವನೆ ಕಾಯಕ ಮಾಡಿದರೂ ಅದು ನಿಷ್ಠೆಯಿಂದ ಕೂಡಿರಬೇಕೆಂದು ಶರಣರು ಹೇಳಿದುದ್ದನ್ನೂ ಈ ವಚನದಿಂದ ಅರಿಯಬಹುದು.

"ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ
ವಿಚ್ಛಂದವಾಗಿರಬೇಕು, ನೇಮದ ಕೂಲಿಯಂದಿನ ನಿತ್ಯ ನೇಮದಲ್ಲಿ
ಸಂದಿರಬೇಕು, ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ
ಕಾಮಿಸಿ ದ್ರವ್ಯಚಕ ಹಿಡಿದರೆ ತಾ ಮಾಡುವ ಸೇವೆ ಭ್ರಷ್ಟವಯ್ಯಾ"

ಹೇಮದಾಸೆಗೆ ಮನಸ್ಸು ಮಾಡಿದರೆ ದೇವರು ಮೆಚ್ಚನು. ನೇಮದಿಂದ ಮಾಡುವ ಕೂಲಿ ನಿತ್ಯ ನೇಮದಲ್ಲಿ ಸಂದಿರಬೇಕು, ಎಂದೂ ನುಡಿದ ಶರಣರು ಕಾಯಕದಲ್ಲಿ ನೀತಿಗೆ ಮುಖ್ಯ ಸ್ಥಾನವನ್ನು ಕೊಟ್ಟರು, ಪ್ರಾಮಾಣಿಕತೆ ಇಲ್ಲದ್ದು ಕಾಯಕವಾಗಲಾರದು. ಸತ್ಯ ಶುದ್ಧ ಕಾಯಕವಂತ ಧನದಲ್ಲಿ ಶುಚಿ ಪುಣ್ಯದಲ್ಲಿ ನಿರ್ಭಯನು ನಿಧಾನ ತಪ್ಪಿದಂತೆ ಆತ ಬಲ್ಲನು. ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು ಅವನು ಅದನ್ನು ಮುಟ್ಟ, ಏಕೆಂದರೆ ಅದು ಕಾಯಕದಿಂದ ಬಂದುದಲ್ಲ, ಕಾಯಕದಿಂದ ದ್ರವ್ಯ ಮಾತ್ರ ದೇವರಿಗೆ ಸಲ್ಲುತ್ತದೆ, ಹೊರತು ಧನವಲ್ಲ ಎಂಬುದನ್ನು ಈ ವಚನದಲ್ಲಿ ತಿಳಿಸಿದ್ದಾರೆ.

ಶಿವಶರಣರ ತತ್ವಜ್ಞಾನದಲ್ಲಿ ಇಂದಿನ ಭೌತಿಕ ತತ್ವಜ್ಞಾನಿಗಳು ಹೇಳುವಂತೆ ಶಕ್ಯವಿದ್ದಷ್ಟು ದುಡಿಯಬೇಕು, ಅವಶ್ಯವಿದ್ದಷ್ಟು ತಿನ್ನಬೇಕು, ಎಂಬ ವಾದ ವೀರಶೈವಕ್ಕೆ ಹೊಂದುವುದಿಲ್ಲ ಶಕ್ಯವಿದ್ದಷ್ಟು ದುಡಿಯಬೇಕೆಂಬುವಲ್ಲಿ ಅವಶ್ಯಕತೆಗಂತೂ ಹೆಚ್ಚಿನ ಉತ್ಪಾದನೆಯನ್ನು ಮಾಡಬೇಕೆಂಬ ಅರ್ಥವಿರುತ್ತದೆ. ಆದರೆ ಕೆಲವರು ತಮಗೆಷ್ಟು ಬೇಕೋ ಅಷ್ಟು ಕೆಲವೊಂದು ವೇಳೆ ಖರ್ಚುಮಾಡಿ ಉಳಿದ ವೇಳೆಯಲ್ಲಿ ಆತ್ಮಚಿಂತನೆಯಲ್ಲಿ ಅಂದರೆ ತನ್ನ ತಾನರಿವ ವಿದ್ಯೆಗಳಿಸುವಲ್ಲಿ ಅವಕಾಶ ಮಾಡಿಕೊಳ್ಳಬೇಕಾಗುತ್ತದೆ.

ಸತ್ಯ ಶೋಧನೆ ಸತ್ಯ ನಡೆಯುವಂಥದು, ಅಂಥದಕ್ಕೆ ಕೆಲವರು ತಮ್ಮನ್ನು ಮೀಸಲಾಗಿರಿಸಿಕೊಳ್ಳಬೇಕಾಗುತ್ತದೆ. ಆದರೆ ಅವರು ತಮ್ಮ ದೇಹ ಪೋಷಣೆಗೆ ಇನ್ನೊಬ್ಬರನ್ನು ಅವಲಂಬಿಸಕೂಡದೆಂಬ ತತ್ವನಿಷ್ಟವಾದ ಪರಮ ಗುರಿಯನ್ನು ಹೇಳುವುದಕ್ಕೆ "ಕಾಯಕವೇ ಕೈಲಾಸ"ವೆಂಬ ತತ್ವ ಆಚರಿಸಿದೆ. ಸತ್ಯ ಶೋಧನೆಯಲ್ಲಿ ಆಸಕ್ತಿಯುಳ್ಳವರು ದೇಹ ಪೋಷಣೆಗೆ ಬೇಕಾಗುವುದಕ್ಕಿಂತ ಹೆಚ್ಚಿನ ಗಳಿಕೆ ಮಾಡುವುದರಲ್ಲಿ ಆಗಲೀ ಸಂಗ್ರಹಿಸ ಬೇಕೆಂಬುದಲ್ಲಾಗಲೀ ಅನಾಸಕ್ತರಾಗಿರಬೇಕೆಂಬ ಅನಾಸಕ್ತಿಯೋಗವನ್ನು ಅನುಸರಿಸಬೇಕಾಗುತ್ತದೆ.

ಶಿವಶರಣರ ಸಮನ್ವಯ ಯೋಗದ ಮಾರ್ಗದಲ್ಲಿ ಜಾತಿ, ಜನ್ಮ, ವರ್ಣ ಇವುಗಳ ಭ್ರಮೆ ಹರಿದೊಗೆಯಲೇ ಬೇಕು.

"ಪಾಪಿಯು" ಧನ ಪ್ರಾಯಶ್ಚಿತ್ತಕಲ್ಲದೆ ಸತ್ ಪಾತ್ರಕ್ಕೆ ಸಲ್ಲದಯ್ಯ
ನಾಯಿಯ ಹಾಲು ನಾಯಿಗಲ್ಲದೇ ಪಂಚಾಮೃತಕ್ಕೆ ಸಲ್ಲದಯ್ಯ,
ನಮ್ಮ ಕೂಡಲಸಂಗನ ಶರಣರಿಗಲ್ಲದೇ ಆಡುವ ಅರ್ಥವ್ಯರ್ಥಕಂಡಯ್ಯಾ
ಕಾಯಕದಿಂದ ಬಂದ ಹಣ–ಗುರು–ಲಿಂಗ–ಜಂಗಮಕ್ಕೆ ಸಲ್ಲುವಂತಿರ
ಬೇಕು, ಕಾಯಕ ಮಾಡುವುದು ಹಣ ಸಂಗ್ರಹಣ ದಾಸೆಗಲ್ಲ, ಮತ್ತು
ಗಳಿಕೆಗಾಗಿಯೂ ಅಲ್ಲ, ಗಳಿಕೆ ಎನ್ನುವುದು ಲೋಭಿಯ ಗುಣ, ಇಂದಿಗೆ
ನಾಳೆಂಗೆ, ಎಂದು ಕೂಡಿಡುವ ಭಕ್ತ ನಿಜವಾದ ಭಕ್ತನಲ್ಲ, ಕಾರಣ
ಭಕ್ತನು ನಿರಾಕಾರವಾದಿ ಮನೋಭಾವನೆ ಹೊಂದಿರಬೇಕು.

ಅಂತಲೇ ಆಯ್ದಕ್ಕಿ ಲಕ್ಕಮ್ಮ, ತನ್ನ ಗಂಡ 'ಅಕ್ಕಿ' ಸಂಗ್ರಹಣೆ ಮಾಡುವುದನ್ನು ಕಂಡು ತರಾಟಿಗೆ ಎಳೆದು ಸನ್ಮಾರ್ಗಕ್ಕೆ ಎಳೆದೊಯ್ಯಲು ಪ್ರಯತ್ನಿಸುತ್ತಾಳೆ ಈ ವಚನದಿಂದ ಮಾಡುವುದು.

ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ?
ರೋಷವೆಂಬುದು ಯಮದೂತಅರಿಗಲ್ಲದೆ ಅಜಾತರಿಗುಂಟೆ ಅಯ್ಯಾ?
ಈ ಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ
ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ ದೂರಮಾರಯ್ಯ.

ಆಶೆಎಂಬುದು ಅಳಿದು ನಿರಾಶೆಯಲ್ಲಿ ನಿಂದು ಭಕ್ತಿ ಜೀವನವನ್ನು ಸಾಗಿಸುವವರನ್ನು ಶರಣರು ಕಂಡು ಮನಸಾರೆ ಮೆಚ್ಚಿದರು. ಸತ್ಯ ಶುದ್ಧ ಕಾಯಕದಿಂದ ಬಂದ ಹಣ ತನಗೂ–ಗುರು–ಲಿಂಗ ಜಂಗಮಕ್ಕೂವ್ಯಯಿ ಸಬೇಕು.

"ಆಶೆಯಳಿದು ನಿರಾಶೆಯಲ್ಲಿ ನಿಂದು ವೇಷವ ಜರಿದು,
ಸರ್ವರು ಮರೆದು, ಈ ಗುಣತ್ರಯಮಂ ತೊರೆದು
ನಿರಾಶೆಯಮೇಲೆ ನಿಂದರೆ ಅದೇ ಶರಣಂಗೆ ಸರಿ ಎಂದೆ
ಬಸವ ಪ್ರಿಯ ಕೂಡಲ ಚನ್ನಬಸವಣ್ಣ."

ಮಾಡುವ ಕಾಯಕ ಅದು ಸತ್ಯ ಶುದ್ಧ ಚಿತ್ತ ಸಾತ್ವಿಕಯಾಗಿರಬೇಕು, ಎಂಬುದನ್ನು ಆಯ್ದಕ್ಕಿ ಲಕ್ಕಮ್ಮನ ವಚನದಿಂದ ಸ್ಪಷ್ಟವಾಗುವುದು.

" ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ
ಚಿತ್ತಶುದ್ಧದಲ್ಲಿ ಕಾಯಕವ ಮಾಡುವ ಸದ್ಭಕ್ತರಿಗೆ ಎತ್ತನೋಡಿದತ್ತ
ಲಕ್ಷ್ಮಿ ತಾನಾಗಿಪ್ಪಳು ಮಾರಯ್ಯಪ್ರಿಯ ಅಮರೇಶ್ವರ ಲಿಂಗದ
ಸೇವೆಯಳ್ಳನ್ನಕ್ಕ."

ನಾವು ಯಾವುದೇ ಕಾಯಕವನ್ನು ಕೈಗೆತ್ತಿಕೊಂಡು ಮಾಡಿದರೂ ಅದು ಮನಃಪೂರ್ವಕವಾಗಿ ಮಾಡಬೇಕು. ಹಾಗೆ ಮಾಡಿದಲ್ಲಿ ಲಕ್ಷ್ಮಿ ಎತ್ತನೋಡಿದತ್ತ

ಇಳಿಯುವಳು. ಕಾರಣ ಮಾನವರು ತಮ್ಮ ಕಾಯಕ ಮನಶುದ್ಧಿಯಿಂದ ಮಾಡಬೇಕು. ಅದೇ ಇನ್ನೊಬ್ಬರಿಂದ ಮಾಡಿಸಬಾರದು. ಹೀಗೆ ಮಾಡಿದ್ದೇಯಾದರೆ ಶಿವ ಮೆಚಲಾರ.

"ತನ್ನಾಶ್ರಯದ ಸತಿ-ಸುಖವನ್ನು ತಾನುಂಬ ಊಟವನ್ನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ? ಅದೇ ತೆರನಾಗಿ ಲಿಂಗಕ್ಕೆ ಮಾಡುವ ಕೆಲಸ ತಾನೇ ಮಾಡಬೇಕು. ಇನ್ನೊಬ್ಬರಿಂದ ಮಾಡಿಸಲೇಬಾರದು ಎಂಬ ಈ ವಚನದಿಂದ ತಿಳಿಯಬಹುದು.

ಕಾಯಕವನ್ನು ಮಾಡಿ ಬಂದ ಹಣವನ್ನು ಇಂದಿಂಗೆ ನಾಳಿಂಗೆ, ಬೇಕೆಂದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಕೂಡಲ ಸಂಗಮದೇವಾ, ಎಂದು ನುಡಿದಿದ್ದಾರೆ ಕ್ರಾಂತಿಯೋಗಿ ಬಸವಣ್ಣನವರು.

ಒಬ್ಬನ ಗಳಿಕೆ ಎಂದರೆ ಹಲವು ಜೀವಿಗಳ ನಾಶ. ಸಾವಿರ ಜನರ ಹೊಟ್ಟೆಗೆ ಕಲ್ಲುಹಾಕಿ ಒಬ್ಬನೇ ಶ್ರೀಮಂತನಾಗುವುದು. ಶರಣರು ಅವರನ್ನು ತಿರಸ್ಕರಿಸಿದ್ದಾರೆ. ಶರಣರ ಮಾತಿನಲ್ಲಿ ಬಡವ ಬಲ್ಲಿದ ಆಳು, ಅರಸ, ಎಂಬ ತಾರತಮ್ಯವೇ ಹೊಡೆದು ಹಾಕಿ "ಮಾರ್ಕ್ಸವಾದ"ನ ಮಾತಿನಂತೆ ಸಮತಾವಾದನೆಗೆ ನಾಂದಿಯನ್ನೇ ಹಾಡಿದರು. ಸತ್ಯ ಶುದ್ಧ ಕಾಯಕವೇ ಅಂದಿನ ಸಮಾಜದ ಜನರ ಜೀವ ಜೀವಾಳವಾಗಿತ್ತು. ಶಿವ ಶರಣರ ಈ ಕಾಯಕ ತತ್ವದಿಂದ ಅಂದಿನ ಸಮಾಜದಲ್ಲಿಯ " ಕಾಂಗ್ರೆಸ್ " ಕಸದಂತೆ ಹಬ್ಬಿರುವ ಸಮಾಜದ ಪಿಡುಗನ್ನು ನಿರುದ್ಯೋಗ ಸಮಸ್ಯೆಯನ್ನು ನಿರ್ಮೂಲನ ಮಾಡಿ ಮುಂದಿನ ಜನಾಂಗಕ್ಕೆ ಮಾರ್ಗದರ್ಶಿಯಾದರು.

"ಗುರುವಾದರೂ ಕಾಯಕದಿಂದವೆ ಜೀವನ್ಮುಕ್ತಿ,
ಲಿಂಗವಾದರೂ ಕಾಯಕದಿಂದವೆ ಶಿಲೆಯ ಕುರುಹು ಹರಿವುದು
ಜಂಗಮವಾದರೂ ಕಾಯಕದಿಂದವೆ ತನ್ನ ವೇಶದ ಪಾಶ ಹರಿವುದು
ಗುರುವಾದರೂ ಚರಸೇವೆಯ ಮಾಡಬೇಕು
ಲಿಂಗವಾದರೂ ಚರಸೇವೆಯ ಮಾಡಬೇಕು,
ಜಂಗಮವಾದರೂ ಚರಸೇವೆಯ ಮಾಡಬೇಕು,
ಇದು ಚಂದೇಶ್ವರಲಿಂಗದ ಅರಿವು ಕೇಳಾ ಪ್ರಭುವೆ

ಈ ವಚನದಿಂದ ನಮಗೆ ತಿಳಿಯುವುದು ಇಷ್ಟೆ. ಯಾರೇ ಆಗಲಿ ಸತ್ಯ-ಶುದ್ಧ ಕಾಯಕ ಮಾಡಿದಾಗಲೇ ಜೀವನಮುಕ್ತಿ ಹೊಂದಲು ಸಾಧ್ಯ. ಅಷ್ಟೆ ಅಲ್ಲ ಭಾರತಕ್ಕೆ ಅಂಟಿಕೊಂಡ ಸಮಾಜದ ಪಿಡುಗಾದ ನಿರುದ್ಯೋಗ ಸಮಸ್ಯೆ ನಿವಾರಣೆಯಾಗಲು ಸಾಧ್ಯ ಎಂಬ ಮಾತು ಸರ್ವಕಾಲಿಕ ಸತ್ಯತೆಯನ್ನು ಸೂಚಿಸುತ್ತದೆ.

ಕಾಯಕವನ್ನು ದೃಢತೆಯಿಂದ ಅಚಂಚಲತೆಯಿಂದ ಮಾಡುತ್ತ ಮಾಡುತ್ತ ಪ್ರಗತಿ ಹೊಂದಿ ಸಾಧಕನು ಮೆಲ್ಲ-ಮೆಲ್ಲನೆ ಭಕ್ತನೆನಿಸಿಕೊಳ್ಳದೇ ಇರಲಾರನು. ಆವ ಕಾಯಕವಾದರೂ ಅದು ತನು-ಮನ ಬಳಸಿ ಗಳಿಸಿ ತಂದು-ಗುರು-ಲಿಂಗ-ಜಂಗಮರನ್ನು ಮೆಚ್ಚಿಸಬೇಕೆನ್ನುವುದನ್ನು ಬಸವಣ್ಣನವರ ವಚನದಿಂದ ಸ್ಪಷ್ಟವಾಗುವುದು.

— ಕೃಷಿ ಕೃತ್ಯ ಕಾಯುಕದಿಂದಾದರೇನು ?
ತನು ಮನ ಬಳಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ
ಪಾದವ ತೋರಯ್ಯ ಎನಗೆ, ಅದೆಂತೆನೆ ಆತನ ತನು ಶುದ್ಧ, ಆತನ,
ಮನ ಶುದ್ಧ, ಆತನ ನಡೆ ಶುದ್ಧ, ನುಡಿಯೆಲ್ಲ ಪಾವನವು .... ....

ತನು ಮನ ಬಳಲಿಸಿ ಗಳಿಸಿ, ತಂದ ಹಣದಿಂದ ದಾಸೋಹ ಮಾಡುವವ ಭಕ್ತನೇ ನಿಜವಾದ ಸದ್ಭಕ್ತ. ಆತನ ತನು ಮನ, ನಡೆ ನುಡಿ, ಶುದ್ಧ ಪಾವನವು. ಅಂತವನ ದರುಶನತೋರಯ್ಯ, ಎಂದು ಬಸವಣ್ಣ ಬೇಡವಲ್ಲಿ ನಿಜವಾದ ಕಾಯಕ ವ್ರತಾಚಾರಿಯಾದವ ಸಂಬಂಧದ ದುಡ್ಡನ್ನು ನಿಷ್ಠೆಯಿಂದ ದಾಸೋಹಕ್ಕೆ ಸಲ್ಲಿಸಬೇಕು. ಅವನೇ ನಿಜವಾದ ಸದ್ಭಕ್ತನೆನಿಸಿಕೊಳ್ಳುವನು.

ತನುಮನ ಕರಗಿಸಿ ತಂದ ಹಣದಿಂದ ಮಾಡುವ ದಾಸೋಹವೇ ಅಂಗಕ್ಕೆ ತೃಪ್ತಿ ಎಂದು ಹೇಳಿದ ಶರಣರ ನುಡಿ ಅಂದಿನ ಸಮಾಜದ ಜನತೆಗೆ ಕಾಯಕದ ನಿಜವಾದ ಸ್ವರೂಪವನ್ನು ಅರುಹಿ ಸರ್ವರನ್ನು ಉದ್ಯೋಗಿಗಳನ್ನಾಗಿಸಿದರು. ನವ ಸಮಾಜದ ನಿರ್ಮಾಣಕ್ಕೆ ಶರಣರು ಕೊಟ್ಟ ಕೊಡುಗೆ ಅಪೂರ್ವ ಕಾಣಿಕೆ. ಮಹಾಕವಿ ರಾಘವಾಂಕನು ಸಹ "ಶಿವಯೋಗಿಯ ಶರೀರ ವೃಥಾ ಸವೆಯಲಾಗದು, ಅನೂಚಾನವಾಗಿ ಕಾಯಕ ನಡೆಯುತ್ತಿರಬೇಕು " ಎಂದಿದ್ದಾನೆ. ಶಿವಯೋಗಿ-ಯಾದರೂ ಸಹ ತನ್ನ ದೇಹವನ್ನು ದಣಿಸಿ ಕಾಯಕ ಮಾಡಬೇಕು. ಈ ಕಾಯಕ ವ್ಯಕ್ತಿಯ ಆತ್ಮೀಯ ವಿಕಾಸಕ್ಕೆ ಸಹಾಯಕ. ಸ್ವಾವಲಂಬನೆಯ ಮಹಾ ಮಂತ್ರವಿದು. ಕಾಯಕವಿಲ್ಲದೆ ಯಾವ ಶರಣರು ಜೀವಿಸಲಿಲ್ಲ. ಶರಣರು ನಾನಾ ಬಗೆಯ ಕಾಯಕ ಕೈಗೊಂಡರು. ಅವುಗಳಿಂದಲೇ ನಿಜವ ಸಾಧಿಸಿಕೊಂಡರು. ಅಂತೆಯೇ ಶರಣರು ನಡೆದ ಧರೆಯು ಪಾವನವಾಯಿತು. ಅವರಿಂದ ಮಾನವ ಕುಲಕೋಟಿಗೆ ಉದ್ಧಾರದ ಮಾರ್ಗ ತಿಳಿಯಿತು. ಮಾನವರಾಗಿಯೇ ಹುಟ್ಟಿ ಬೆಳೆದು ತಮ್ಮ ಸಿದ್ಧಿಯ ಮೂಲಕ ಶರಣರೆನಿಸಿಕೊಂಡರು. "ನುಡಿದಂತೆ ನಡೆದರು, ನಡೆದಂತೆ ನುಡಿದರು. ಈ ಭೂಲೋಕವನ್ನೇ ಸ್ವರ್ಗಕ್ಕಿಂತ ಮಿಗಿಲೆನಿಸಿಕೊಳ್ಳುವಂತೆ ಮಾಡಿದರು. ಬಸವಣ್ಣ-ನವರ ಮಹಾಮನೆಯಲ್ಲಿ ದಿನಂಪ್ರತಿ ಲಕ್ಷದಮೇಲೆ ತೊಂಬತ್ತಾರು ಸಾವಿರ ಶರಣರುಗಳಿಗೆ ಭೋಜನವಾಗುತ್ತಿತ್ತೆಂದು ತಿಳಿದ ಕೆಲವರು ಶರಣರ ಕಾಯಕದ ಬಗ್ಗೆ ಸಂಶಯ ಪಟ್ಟು ದುಡಿಯದೇ ದೇಹ ಬೆಳೆಸುವರೆಂದು ಭಾವಿಸಿದ್ದುಂಟು. ಆದರೆ ಪ್ರತಿಯೊಬ್ಬ

ಶರಣರು ತನ್ನ ಕಾಯಕವನ್ನು ಮುಗಿಸಿ ಬಂದು ಮಹಾಮನೆಯಲ್ಲಿ ಪ್ರಸಾದ ಸೇವನೆ ಮಾಡುತ್ತಿದ್ದ ಸಂಗತಿ ಅರಿವಾದಾಗ ಮಾತ್ರ ಸಂಶಯ ನಿವಾರಣೆಯಾಗಲು ಸಾಧ್ಯವಾಯಿತು.

ಅಂದಿನ ಸಮಾಜದ ಶಿವ ಶರಣರೆಲ್ಲರೂ ಕಾಯಕ ಮಾಡುತ್ತಿದ್ದರೆಂಬುದನ್ನು ಅವರ ಹೆಸರಿನಿಂದ ತಿಳಿಯಬಹುದು. ಉದಾ : ನುಲಿಯ ಚಂದಯ್ಯಹೆಸರಿನಂತೆಯೇ ಈತ ನೂಲು ಹೊಸೆಯುವುದು ಆತನ ಕಾಯಕ. ಇದೇ ತೆರನಾಗಿ ಹಲವಾರು ಶರಣರ ಕಾಯಕದಿಂದ ಹೆಸರುಗಳು ಹೇಗೆ ತಾನೇ ಬಂದಿವೆ ಎಂಬುದನ್ನು ಈ ಕೆಳಗೆ ಸಂಗ್ರಹಿಸಿದ್ದು ನೋಡಿ ಅರಿಯಬಹುದು.

| | | | |
|---|---|---|---|
| 1 | ನುಲಿಯ ಚಂದಯ್ಯ | — | ನೂಲು ಹೊಸೆಯುವುದು |
| 2 | ಮೋಳಿಗೆಯ ಮಾರಯ್ಯ | — | ಕಟ್ಟಿಗೆ ಮಾರುವುದು |
| 3 | ಆಯ್ದಕ್ಕಿ ಮಾರಯ್ಯ | — | ಹಕ್ಕಲ ಆರಿಸುವುದು |
| 4 | ಮಾದಾರ ಚನ್ನಯ್ಯ | — | ಮಚ್ಚೆ ಹೊಲೆಯುವುದು |
| 5 | ಮೇದಾರ ಕೇತಯ್ಯ | — | ಬಿದುರಿನ ಕೆಲಸ ಮಾಡುವವ |
| 6 | ಕಿನ್ನರಿ ಬೊಮ್ಮಯ್ಯ | — | ಕಿನ್ನರಿ ಬಾರಿಸುವುದು |
| 7 | ಕಾಲಿಕೇತ ಬೊಮ್ಮಯ್ಯ | — | ಹಾಸ್ಯಗಾರ ವೇಷ |
| 8 | ಅಂಬಿಗರ ಚೌಡಯ್ಯ | — | ಅಂಬಿಗ |
| 9 | ಕುಂಬಾರ ಗುಂಡಯ್ಯ | — | ಕುಂಬಾರಿಕೆ |
| 10 | ಹಡಪದ ಅಪ್ಪಣ್ಣಯ್ಯ | — | ಕ್ಷೌರಿಕ |
| 11 | ಮಡಿವಾಳ ಮಾಚಯ್ಯ | — | ಅಗಸ |
| 12 | ಪಡಿಹಾರಿ ಮುತ್ತಣ್ಣ | — | ದ್ವಾರಪಾಲಕ |
| 13 | ಗಾಳದ ಕನ್ನಪ್ಪ | — | ಮೀನುಗಾರ |
| 14 | ಏಲೇಶ್ವರ ಕೇತಯ್ಯ | — | ಒಕ್ಕಲುತನ |
| 15 | ಡೋಹರ ಕಕ್ಕಯ್ಯ | — | ಡೋಹರ |
| 16 | ಅಲ್ಲಯ್ಯ | — | ಸಂಗೀತ |
| 17 | ಗಟ್ಟಿವಾಳಯ್ಯ | — | ನರ್ತಕ |
| 18 | ಸಕಲೇಶ ಮಾದರಸ | — | ಕಲ್ಲುಗಾರಿಕೆ |
| 19 | ಬಾಹೂರ ಬ್ರಹ್ಮಯ್ಯ | — | ತೋಟಗಾರಿಕೆ |
| 20 | ಶಿವಶಂಕರಯ್ಯ | — | ಕಸಗುಡಿಸುವುದು |
| 21 | ಗೋರಕ್ಷ | — | ಗೋವು ಕಾಯುವುದು |
| 22 | ಚಿಕ್ಕದೇವಯ್ಯ | — | ಪಾತ್ರೆಮಾರುವವ |
| 23 | ಬಾಕಿ ಬಸವಪ್ಪ | — | ಬಡಗಿ |
| 24 | ಬಂಕನಾಡ | — | ಸೈನಿಕ |

| | | | |
|---|---|---|---|
| 25 | ವೈದ್ಯ ಸಂಗಣ್ಣ | — | ವೈದ್ಯ |
| 26 | ಕನಕದ ನಾಚಯ್ಯ | — | ಬಂಗಾರದ-ವ್ಯಾಪಾರಿ |
| 27 | ರತ್ನದ ರಾಚಯ್ಯ | — | ರತ್ನ ವ್ಯಾಪಾರಿ |
| 28 | ಪುಷ್ಪದ ಸೋಮಯ್ಯ | — | ಹೂಗಾರ |
| 29 | ಒಕ್ಕಲು ಮುದ್ದಯ್ಯ | — | ಒಕ್ಕಲುತನ |
| 30 | ಸೂಲದ ಬ್ರಹ್ಮಪ್ಪ | — | ಸೈನಿಕ |
| 31 | ಕೊಟ್ಟಣದ ರೇಮ್ಮವ್ವ | — | ಕುಟ್ಟುವ ಕೆಲಸ |
| 32 | ಬದರಿ ರೆಮ್ಮವ್ವ | — | ನೂಲು ತೆಗೆಯುವುದು |
| 33 | ಸಿದ್ಧದೇವಮ್ಮ | — | ವಾದ್ಯವಾದನ |

ಅಂದಿನ ಕಾಲದ ಶಿವಶರಣ-ಶರಣೆಯರು ಭಿನ್ನ-ಭಿನ್ನ ಕಾಯಕಜೀವನ ನಡೆಸಿದರು. ಅದರಲ್ಲಿ ಮೇಲು ಕೀಳೆಂಬ ಭಾವನೆ ಇರಲಿಲ್ಲ. ಕಾಯಕ ಚಿಕ್ಕದಿರಲಿ ದೊಡ್ಡದಿರಲಿ, ಅದನ್ನೇ ಏಕ-ನಿಷ್ಠೆಯಿಂದ ನೆರವೇರಿಸಿಕೊಂಡು ಹೋಗುವ ಜವಾಬ್ದಾರಿ ಅವರದಾಗಿತ್ತು. ಹೀಗಾಗಿ ಜೀವನವನ್ನು ಅರಿತಾಗ ಮನವರಿಕೆಯಾಗುತ್ತದೆ. ಎಲ್ಲಾ ಶಿವ ಶರಣರ ಕಾಯಕ ಜೀವಿಸಲು ಮಹತ್ವಪೂರ್ಣವಾಗಿದ್ದಾಗಿದೆ.

## ಗ್ರಂಥ ಋಣ


1 ಬಸವಣ್ಣನವರ ವಚನಗಳು — ಸಂ. ಡಾ: ಆರ್. ಸಿ. ಹಿರೇಮಠ

2 ಮಾರ್ಗ ಸಂಪುಟ ಭಾಗ-1 2 — ಡಾ: ಎಂ. ಎಂ. ಕಲಬುರ್ಗಿ

3 ವಚನ ಮಂಜರಿ — ಸಂ. ಡಾ: ಚನ್ನಕ್ಕ ಎಲಿಗಾರ

4 ಬಸವಣ್ಣನವರ ಯೋಜನೆಗಳು (ಉಪನ್ಯಾಸಕ ಗ್ರಂಥಮಾಲೆ) — ಡಾ: ಜಿ. ಸಿ. ಜವಳಿ

5 ಶಿವಶರಣರ ಕ್ರಾಂತಿ (ಉಪನ್ಯಾಸಕ ಗ್ರಂಥಮಾಲೆ) — ಪ್ರೊ. ಸಿದ್ದಣ್ಣ ಲಂಗೋಟಿ

6 ಶಿವಶರಣರ ಸಮನ್ವಯ ಯೋಗ (ಉಪನ್ಯಾಸಕ ಗ್ರಂಥ ಮಾಲೆ) — ಸಂ. ನಾ. ಮ. ದೊಡ್ಡಯ್ಯ ಶಾಸ್ತ್ರಿ

7 ಶರಣರ ಕಾಯಕ ತತ್ವ (ಉಪನ್ಯಾಸಕ ಗ್ರಂಥ ಮಾಲೆ) — ಎಂ. ಪಿ. ಎಂ. ಶಾಂತವೀರಯ್ಯ

# ವಿಶ್ವದಲ್ಲಿ ಭಾರತೀಯ ಸಂಸ್ಕೃತಿ—೨

-ಎಚ್.ಎಸ್. ನರಸಿಂಹಜೀಯರ್, ಲಕ್ಷ್ಮಯ್ಯ ಗಾರ್ಡನ್, 14ನೇ ಕ್ರಾಸ್,
ಸೋಮೇಶ್ವರಪುರಂ, ತುಮಕೂರು-2

ಕೊಲಂಬಸ್ ಮಹಾಶಯನು ಅಮೇರಿಕಾ ದೇಶವನ್ನು ಕಂಡು ಹಿಡಿಯುವುದಕ್ಕೆ ಸಾವಿರಾರು ವರ್ಷಪೂರ್ವದಲ್ಲಿಯೇ ಅಲ್ಲಿ ಭಾರತೀಯ ನಾಗರಿಕತೆ ಹರಡಿದ್ದ ಬಗ್ಗೆ ದೊರೆತಿರುವ ದಾಖಲೆಗಳನ್ನು ಹಿಂದಿನ ಲೇಖನದಲ್ಲಿ ನೋಡಿದೆವು. ವಿಶ್ವದ ಮತ್ತೆ ಕೆಲವು ಕಡೆ ದೊರೆತಿರುವ ಐತಿಹಾಸಿಕ ದಾಖಲೆ ಮತ್ತು ಪ್ರಾಚ್ಯ ಸಂಶೋಧನೆಗಳ ಬಗ್ಗೆ ನೋಡೋಣ.

ಭಾರತೀಯರು ತಮ್ಮ ಜ್ಞಾನವನ್ನು ಇಡೀ ಮಾನವ ಕೋಟಿಯ ಸ್ವತ್ತೆಂದು ಭಾವಿಸಿ ಅದನ್ನು ಅರಿಸಿ ಬಂದವರಿಗೆಲ್ಲಾ ನಿರ್ವಂಚನೆಯಿಂದ ಧಾರೆಯೆರೆಯುತ್ತಿದ್ದರು. ವಿಶ್ವದಲ್ಲಿ ಇದು ಹರಡಿದ ಬಗ್ಗೆ ಸ್ವಾಮಿವಿವೇಕಾನಂದರು ಈರೀತಿ ಹೇಳಿದ್ದಾರೆ.

"Like the gentle dew that falls unseen and unheard and yet brings in to blossom the fairest of roses, has been the Contribution of India to the thought of the world· silent unperceived yet omnipresent in its effect it has revolutionalised the thought of the world ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಯಾವ ರೀತಿಯಲ್ಲಿ ಮಂಜು ಯಾರಿಗೂ ಗೋಚರಿಸದೆ ಸದ್ದುಗದ್ದಲವಿಲ್ಲದೆ ಸಸ್ಯರಾಶಿಯಮೇಲೆ ಬಿದ್ದು ಸೊಗಸಾದ ಗುಲಾಬಿಯತಂಹ ಪುಷ್ಪಗಳು ಅರಳಲು ಕಾರಣವಾಗಿದೆಯೋ ಹಾಗೆ ನಮ್ಮ ಭಾರತೀಯ ಸಂಸ್ಕೃತಿ ವಿಶ್ವದಲ್ಲಿ ಹರಡಿ ಆಲೋಚನಾಶಕ್ತಿಯನ್ನು ಉತ್ತಮಗೊಳಿಸಲು ಕಾರಣವಾಗಿದೆ. ಯಾರ ಗಮನಕ್ಕೆ ಬಾರದಿದ್ದರೂ ಅಂತಹ ಉತ್ತಮ ವಿಚಾರ ಶೀಲತೆ ವಿಶ್ವದಲ್ಲಿ ಎದ್ದು ಕಾಣುವಂತೆ ಮಾಡಿದೆ ಎಂಬುದು ಅವರ ಅಭಿಪ್ರಾಯ.

ದಾಖಲೆಗಳನ್ನು ಪರಿಶೀಲಿಸಿದಾಗ ಯೂರೋಪ್ ಖಂಡದ ನಾನಾಭಾಗಗಳಲ್ಲಿ ಕ್ರಿ.ಪೂ. 10 ನೆಯ ಶತಮಾನದಷ್ಟು ಪೂರ್ವದಲ್ಲಿಯೇಭಾರತೀಯ ಸಂಸ್ಕೃತಿ ಪ್ರಭಾವ ಬೀರಿರುವುದು ಕಾಣಬಂದಿದೆ. ರಷ್ಯಾ ಮತ್ತು ಸೈಬೀರಿಯಾ ದೇಶಗಳ ಅನೇಕ ಭಾಗಗಳಲ್ಲಿ ಹಿಂದೂ ಸಂಸ್ಕೃತಿಯ ಕುರುಹುಗಳು ದೊರೆತಿವೆ. ಉತ್ತರ ಯೂರೋಪಿನ ಕೆಲವು ಭಾಗಗಳಲ್ಲಿ "ಅಶ್ವಮೇಧ" ಯಾಗ ಮಾಡಿದ ಬಗ್ಗೆ ದಾಖಲೆ ಸಿಕ್ಕಿವೆ. ಲಿಥುವೇನಿಯಾ ದೇಶದಲ್ಲಿ ಈಗಲೂ ಹಿಂದೂಗಳ ಕೆಲವು ಆಚಾರ ವಿಚಾರಗಳನ್ನು ಕೆಲವರಲ್ಲಿ ಕಾಣಬಹುದಾಗಿದೆ. ಅಲ್ಲಿಯ ನದಿಗಳ ಹೆಸರಗಳು ಭಾರತೀಯ ನದಿಗಳ ಹೆಸರುಗಳಂತೆಯೇ ಇವೆ. ಉದಾ : ತಪ್ತಿ (ತಪತಿ), ನೆಮುನ (ಯಮುನ), ಶ್ರೋಬತಿ

(ಸರಸ್ವತಿ), ನರ್ಬುದೆ (ನರ್ಮದ), ಮುಂತಾದವುಗಳು. ಕೆಲವು ಜನಾಂಗದಲ್ಲಿ ಕುರು, ಪುರು, ಯಾದವ, ಸುದವ್ ಎಂಬ ಹೆಸರುಗಳನ್ನು ಪುರುಷರು ಇಟ್ಟುಕೊಂಡಿದ್ದಾರೆ. ಅವರು ಪೂಜಿಸುವ ದೇವತೆಗಳೆಂದರೆ ಇಂದ್ರ, ವರುಣ, ಪುರಕನ್ಯ(ಪರ್ಜನ್ಯ) ಮುಂತಾದವುಗಳು. ಇವೆಲ್ಲವೂ ಭಾರತೀಯ ಹೆಸರುಗಳೆಂಬುದನ್ನು ನಾವು ಗಮನಿಸಿದಾಗ ಅಲ್ಲಿ ನಮ್ಮ ಸಂಸ್ಕೃತಿ ಹರಡಿತ್ತು ಎಂಬುದು ನಿಸ್ಸಂಶಯವಾದ ವಿಚಾರವೇ ಆಗಿದೆ. ಲಿಥುವೇನಿಯಾ ದೇಶದ ಪ್ರಾಚ್ಯವಸ್ತು ಸಂಶೋಧಕರಾದ pulk Tarseuka ರವರು ಬರೆದಿರುವ priesistoiric Lietuva ಗ್ರಂಥದಲ್ಲಿ ಈ ಬಗ್ಗೆ ಇನ್ನೂ ಅನೇಕ ಹೆಚ್ಚಿನ ಪುರಾವೆಗಳನ್ನು ನೋಡಬಹುದಾಗಿದೆ.

ಹಿಂದೆ ಜಿಜ್ಞಾಸುಗಳು ಆಧ್ಯಾತ್ಮ ಪಿಪಾಸುಗಳು ಆಗಾಗ್ಗೆ ವಿಶ್ವದ ನಾನಾ ಭಾಗಗಳಿಂದ ಬಂದು ಪರ್ಷಿಯಾ, ಏಷ್ಯಾ ಮೈನರ್ ಹಾಗೂ ಅಲೆಕ್ಸಾಂಡ್ರಿಯಾದಲ್ಲಿ ಸಭೆ ಸೇರಿ ವಿಚಾರಗಳ ವಿನಿಮಯ ಮಾಡಿಕೊಳ್ಳುತ್ತಿದ್ದರು. ಪ್ರಮುಖವಾಗಿ ಆಧ್ಯಾತ್ಮ ಮತ್ತು ವಿಜ್ಞಾನ ಹಾಗೂ ಧಾರ್ಮಿಕ ವಿಚಾರಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಇಂತಹ ಸಭೆಗಳಲ್ಲೆಲ್ಲಾ ಭಾರತೀಯ ಪ್ರತಿನಿಧಿಗಳು ಭಾಗವಹಿಸುತ್ತಿದ್ದರು. ಉತ್ತಮ ವಿಚಾರಗಳನ್ನು ಇಂತಹ ಸಂದರ್ಭಗಳಲ್ಲಿ ಭಾರತೀಯರು ಎಲ್ಲರ ಗಮನಕ್ಕೂ ತರುತ್ತಿದ್ದುದರಿಂದ ಭಾರತೀಯ ಪರಂಪರೆ ವಿಶ್ವದ ನಾನಾ ಭಾಗಗಳಿಗೆ ಪ್ರಸರಿಸಲು ಕಾರಣವಾಯಿತು ಎಂಬುದು ಕೆಲವರ ಅಭಿಪ್ರಾಯ.

ವಿಶ್ವದ ನಾನಾ ಭಾಗಗಳಲ್ಲಿ ಭಾರತೀಯ ರಾಯಭಾರಿಗಳ ರೂಪದಲ್ಲಿ ಸಂಚರಿಸಿ ಹಿಂದೂಗಳು ಮಾರ್ಗದರ್ಶನ ಮಾಡುತ್ತಿದ್ದರೆಂಬುದನ್ನು ಜರ್ಮನ್ ದೇಶದ Max muller, Garbe ಮತ್ತು winterminty ಎಂಬುವರು ಒಪ್ಪಿಕೊಂಡಿದ್ದಾರೆ. ಆದ್ದರಿಂದ ಭಾರತೀಯ ನಾಗರೀಕತೆ, ಸಂಸ್ಕೃತಿಯ ಪ್ರಭಾವ ಅಲ್ಲಲ್ಲಾ ಹರಡಲು ಕಾರಣವಾಯಿತು. ಕ್ರಿ.ಪೂ. 600 ರಲ್ಲಿ ಗ್ರೀಕ್ ತತ್ವಜ್ಞಾನಿ Thales ಹೇಳಿರುವ "that everything springs from water" ಎಂಬ ವಿಚಾರವೂ, Anaximander ಹೇಳಿರುವ "that the first principle is not water but infinite atmosphere" ಎಂಬ ವಿಚಾರವೂ, ಇವನ ಶಿಷ್ಯನಾದ Anaximenes ಎಂಬಾತನು ಹೇಳಿರುವ ವಿಚಾರಗಳೆಲ್ಲವೂ ಭಾರತೀಯರ ವಿಚಾರವೇ ಎಂಬುದನ್ನು ಪಾಶ್ಚಾತ್ಯ ವಿದ್ವಾಂಸರಾದ Garbe ಯವರು ಒಪ್ಪಿಕೊಂಡಿದ್ದಾರೆ.

ಕ್ರಿ.ಪೂ. 500 ರ ಸುಮಾರಿನಲ್ಲಿದ್ದ Heraclitus ಹೇಳಿರುವ "that all bodies are tranformation of fire and that every thing that exists is derived from it and strives to

return to it ಎಂಬ ವಿಚಾರವು ಛಾಂದೋಗ್ಯ ಉಪನಿಷತಿನಲ್ಲಿರುವುದನ್ನು ವಿದ್ವಾಂಸರಾದ Garbe ತೋರಿಸಿದ್ದಾರೆ. Empedocles (ಕ್ರಿ.ಪೂ. 450) ರಲ್ಲಿ ಹೇಳಿದ್ದ Theory of eternity and indestructibility of matter ಎಂಬುದೂ ಸಹ Sankhya principle ನಲ್ಲಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. (ವಸ್ತುಗಳಿಗೆ ಆದಿ ಅಂತ್ಯಗಳಿಲ್ಲದಿರುವಿಕೆ) ಅಲ್ಲದೆ ಸತ್ವ, ರಜ ಮತ್ತು ತಮೋಗುಣಗಳ ಆಧಾರದ ಮೇಲೆ ವಿಶ್ವದ ರಚನೆಯಾಗಿದೆ ಎಂಬ ವಿಚಾರವೂ ಸಹ ಭಾರತೀಯ ಮೂಲವೇ ಆಗಿದೆ.

ಪೈಥಾಗೊರಸ್ ಹೇಳಿರುವ ಯೂಕ್ಲಿಡ್‌ನ 47 ನೆಯ ಪ್ರಮೇಯವು ಭಾರತೀಯರಿಗೆ ಹೊಸದೇನಲ್ಲ. ಇದು ಬೋಧಾಯನ ಶುಲ್ವ ಸೂತ್ರದಲ್ಲಿದೆ. ಕೆಲವರು ಪೈಥಾಗೊರಾಸ್ ಎಂಬುವನು ಭಾರತೀಯನೆಂದೂ ಅವನ ಹೆಸರು "ಪೃಥ್ವಿಗುರು" ಎಂದೂ ಅಭಿಪ್ರಾಯ ಪಡುತ್ತಾರೆ. ಏನೇ ಆದರೂ ಈ ವಿಚಾರ ಶುಲ್ವ ಸೂತ್ರಗಳಲ್ಲಿ ಅಡಗಿದೆ. ಈ ವಿಚಾರವಲ್ಲಿ ವಿಮರ್ಶಿಸಿ ಪರಿಶೀಲಿಸಿದ Colebrooke ಮಹಾಶಯನು" That the doctrines of Pythagoras were rooted in India· Adverting to what has come to us of the history of Pythagoras, I shall not hesitate to acknowledge an inclination to consider the Grecian to have been indebted to Indian instructors'' ಎಂದಿದ್ದಾರೆ. ಅಂದರೆ "ಪೈಥಾಗೊರಸ್‌ನ ವಿಚಾರಗಳ ಮೂಲ ಭಾರತ. ಪೈಥಾಗೊರಸ್‌ನ ಚರಿತ್ರೆ ಪ್ರಕಾರ ಗ್ರೀಸ್ ದೇಶದವರು ಭಾರತೀಯ ಗುರುಗಳಿಗೆ ಕೃತಜ್ಞರಾಗಿದ್ದಾರೆಂಬುದನ್ನು ನಾನು ನಿಸ್ಸಂಶಯವಾಗಿ ಒಪ್ಪಿಕೊಳ್ಳುತ್ತೇನೆ" ಎಂಬುದು ಅವನ ಅಭಿಮತ. Jones ಮಹಾಶಯನು ಪೈಥಾಗೊರಸ್‌ನ ವಿಚಾರವು ಶುಲ್ವ ಸೂತ್ರದಲ್ಲಿರುವುದನ್ನು ತೋರಿಸಿ ಕೊಟ್ಟ ಮೊಟ್ಟಮೊದಲಿಗ. Sankhya system ನ ತತ್ವಗಳೇ ಪೈಥಾಗೊರಸ್‌ನ ತತ್ವಗಳೆಂದು Jones ತಿಳಿಸಿದ. ಅಲ್ಲದೆ Scharder ಎಂಬ ವಿದ್ವಾಂಸನು " I conclusively pronounce India to be the birth place of Pythagorean ideas'' ಎಂದಿದ್ದಾನೆ.

ಇವನ ಅಭಿಪ್ರಾಯದ ಪ್ರಕಾರವೂ ಪೈಥಾಗೊರಾಸ್‌ನ ತತ್ವವಿಚಾರಗಳೆಲ್ಲಕ್ಕೂ ಭಾರತವೇ ಮೂಲವೆಂಬುದು ಖಚಿತ ಪಟ್ಟಿದೆ.

ಕ್ರಿ. ಪೂ. 469–399 ಈ ಅವಧಿಯಲ್ಲಿಯೇ ಅಂದರೆ ಸಾಕ್ರಟೀಸ್‌ನ ಕಾಲದಲ್ಲಿಯೆ ಭಾರತೀಯರು ಅಥೆನ್ಸ್ ನಗರಕ್ಕೆ ಸಂದರ್ಶನ ಕೊಟ್ಟಿದ್ದರು' ಎಂಬ ವಿಚಾರವನ್ನು ಮ್ಯಾಕ್ಸ್‌ಮುಲ್ಲರ್ ಒಪ್ಪಿಕೊಂಡಿದ್ದಾರೆ. ಸಾಕ್ರಟೀಸ್, ಪ್ಲೇಟೋ ಹಾಗೂ ಅರಿಸ್ಟಾಟಲ್ ಮುಂತಾದ ಪ್ರಮುಖ ತತ್ವಜ್ಞಾನಿಗಳ ವಿಚಾರಗಳೆಲ್ಲೆಲ್ಲಾ ಭಾರತೀಯ ಮೂಲವಿದೆ ಎಂಬುದನ್ನು ಪಾಶ್ಚಾತ್ಯರೇ ವಿಶ್ವಕ್ಕೆ ತೋರಿಸಿಕೊಟ್ಟಿದ್ದಾರೆ. ಪ್ಲೇಟೋ (ಕ್ರಿ. ಪೂ. 427-347) ತಾನು ಅನೇಕ ದೇಶಗಳ ಪರ್ಯಟನೆ ಮಾಡುವಾಗ ಭಾರತ ದೇಶಕ್ಕೂ ಬಂದಿದ್ದನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇವನ ತತ್ವಗಳೆಲ್ಲೆಲ್ಲಾ ಭಾರತೀಯ Sankhya principle ಮೂಲವೆಂಬುದನ್ನು ಈಗ ಅರಿತಿದ್ದಾರೆ. Plato ಬರೆದಿರುವ ವಿಶ್ವಮಾನ್ಯತೆ ಪಡೆದಿರುವ "Republic" ಗ್ರಂಥದಲ್ಲಿರುವುದೆಲ್ಲಾ ಭಾರತೀಯ ಅಂಶಗಳೇ ಎಂಬುದನ್ನು ನೋಡಬಹುದಾಗಿದೆ. Urwick ಎಂಬ ವಿದ್ವಾಂಸನು ಈ ಬಗ್ಗೆ ವಿಮರ್ಶಿಸಿ ಈ ರೀತಿ ಬರೆದಿದ್ದಾನೆ. "That all most all of what plato said in his Republic is only a restatement of Indian ideas" ಅಂದರೆ Republic ಗ್ರಂಥದಲ್ಲಿ ಪ್ಲೇಟೋ ಮಹಾಶಯನು ಹೇಳಿರುವುದೆಲ್ಲವೂ ಭಾರತೀಯ ವಿಚಾರಗಳೇ ಎಂದಿದ್ದಾನೆ. Plato ಬರೆದಿರುವ "World egg" ಇದರ ಮೂಲ ಮನುಶಾಸ್ತ್ರದ 10 ನೆಯ ವಿಧಿಯಲ್ಲಿದೆ. Golden egg ಬ್ರಹ್ಮಾಂಡ ಇವೆಲ್ಲವುಗಳ ಸಾಮ್ಯವನ್ನು ಕಂಡು Rawlinson ಎಂಬ ವಿದ್ವಾಂಸ "These similarities are too close to be accidental" ಈ ಬಗ್ಗೆ ಭಾರತೀಯ ವೇದ ಪುರಾಣಗಳನ್ನು, ಸಂಸ್ಕೃತಿಯನ್ನು ಆಳವಾಗಿ ಅಭ್ಯಾಸ ಮಾಡಿ ಇಡೀ ವಿಶ್ವಕ್ಕೆ ಭಾರತೀಯ ಸಂಸ್ಕೃತಿಯ ಮಹತ್ವವನ್ನು ತೋರಿಸಿಕೊಟ್ಟ Maxmuller ರವರು "That the similarity between platos language and that of Upanishads is sometimes starting" ಎಂದಿದ್ದಾರೆ. ಕೆಲವು ಸಾರಿ ಉಪನಿಷತ್‌ನ ಭಾಷಾಶೈಲಿಗೂ, ಪ್ಲೇಟೋ ಬರೆದಿರುವ ಶೈಲಿಗೂ ಸಾಮ್ಯವಿರುವುದನ್ನು ಪರಿಶೀಲಿಸಿದಾಗ ಆಶ್ಚರ್ಯವಾಗುತ್ತೆ ಎಂದಿದ್ದಾರೆ. Garbe ಮಹಾಶಯನು "that the historical possibility of the Greecian world of thought being influenced by India through the medium of Persia must unquestionably be granted" ಎಂದಿದ್ದಾರೆ. ಭಾರತ ದೇಶವು ಪರ್ಷಿಯಾ ದೇಶದ ಮುಖಾಂತರ ಗ್ರೀಸ್ ದೇಶದ ತತ್ವಜ್ಞಾನಗಳ ಮೇಲೆ ತನ್ನ ಪ್ರಮುಖವಾದ ಪ್ರಭಾವ ಬೀರಿದೆ ಎಂಬುದು ಐತಿಹಾಸಿಕ ಸತ್ಯವೆಂಬುದು ಅವರ ಖಚಿತ ಅಭಿಮತವಾಗಿದೆ.

(ಮುಂದುವರಿಯುತ್ತದೆ)

# ವ್ಯಕ್ತಿತ್ವ ನಿರ್ಮಾಣಕ್ಕೆ ಪ್ರತಿಬಂಧಕವಾಗಿರುವ ಶಿಕ್ಷಣ-2

-ಅರೆಯೂರು ನರಸಿಂಹಮೂರ್ತಿ, ಪ್ರಶಿಕ್ಷಕರು, ಶ್ರೀ ಸಿದ್ಧಗಂಗಾ ಶಿಕ್ಷಕರ
ತರಬೇತಿ ಸಂಸ್ಥೆ, ತುಮಕೂರು.

## ಪ್ರಾಥಮಿಕ ತರಗತಿಗಳಲ್ಲಿನ ಶಿಕ್ಷಣ

ವಿದ್ಯಾಭ್ಯಾಸದ ಕ್ರಮ ಪ್ರಾಚೀನ ಭಾರತದ ಪರಂಪರೆ. (ಒಂದು ಪಕ್ಷಿನೋಟ)

ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ನಮ್ಮ ಹಿಂದಿನ ಸಂಚಿಕೆಯಲ್ಲಿ ಪೂರ್ವಿಕರು ದ್ಯಾಭ್ಯಾಸವನ್ನು ಗುರುಕುಲಾಶ್ರಮದಲ್ಲಿ ನಡೆಸುತ್ತಿದ್ದರೆಂಬುದನ್ನು, ಗುರು-ಶಿಷ್ಯರ ಂಬಂಧ ಯಾವ ರೀತಿ ಇತ್ತೆಂಬುದನ್ನು ಸೂಕ್ಷ್ಮವಾಗಿ ಪರಿಚಯಿಸಲಾಗಿತ್ತು. ಜನಸಂಖ್ಯೆ ಪ್ರಮಾಣ ಹೆಚ್ಚಾಗುತ್ತಿರುವ ಇಂದು ಅದೇ ಪದ್ಧತಿಯನ್ನು ಜಾರಿಗೊಳಿಸಲು ಸಾಧ್ಯ ಲ್ಲ. ಇದಕ್ಕೆ ಅನೇಕಾರು ಕಾರಣಗಳಿವೆ. ಋಷಿ-ಮುನಿಗಳ ಕಾಲದಲ್ಲಿ ಯಜ್ಞಯಾಗಾ ಗಳನ್ನು ನಡೆಸುತ್ತಾ ತಪಸ್ಸಿನ ಆಚರಣೆಯಲ್ಲಿ ತೊಡಗುವ ಹವ್ಯಾಸ ಇತ್ತು. ದೇವರು ಂಬ ಹಂಬಲ ಮತ್ತು ಮುಕ್ತಿಗಾಗಿ ಅನೇಕ ಸಾಧನಗಳನ್ನು ನಡೆಸುತ್ತಾ ಮೋಕ್ಷ ಕ್ಕಾಗಿ ಕರ್ಮ ನಡೆಸುವ ಸಂದರ್ಭಗಳಲ್ಲಿ ಜ್ಞಾನಮಾರ್ಗವನ್ನು ಅನುಸರಿಸಬೇಕೆಂದು ನಮ್ಮ ಇಂದ್ರಿಯಗಳನ್ನು ಹತೋಟಿಗೆ ತಂದುಕೊಂಡು ಅದರ ಮೂಲಕ ಧ್ಯಾನ, ಜಪ, ಹೋಮ, ತಪಸ್ಸು ಮುಂತಾದ ಕಾರ್ಯಾಚರಣೆಗಳಲ್ಲಿ ತೊಡಗುತ್ತಿದ್ದರು. ಇದಕ್ಕಾಗಿ ಅರಣ್ಯಗಳಿಗೆ ಹೋಗುತ್ತಿದ್ದುದೂ ಉಂಟು. ಕಲಿಯಬೇಕೆಂಬ ಹಂಬಲವಿರುವ ವ್ಯಕ್ತಿ ಗಳು ಅವರ ಮಾರ್ಗವನ್ನೇ ಅನುಸರಿಸುತ್ತಿದ್ದರು. ಇದೇ ಒಂದು ಗುಂಪಿನ ಜನ ಈ ಕಾರ್ಯದಲ್ಲಿದ್ದರೆ, ಉಳಿದವರು ಬೇಸಾಯ ಅಥವಾ ಯಾವುದಾದರೊಂದು ಕಸುಬು ಗಳಲ್ಲಿ ತೊಡಗಿಸಿಕೊಂಡು ತನ್ಮೂಲಕ ಪ್ರತಿಯೊಬ್ಬ ಪ್ರಜೆಯೂ ಸುಖವಾಗಿರುವಂತೆ ನೋಡಿಕೊಳ್ಳುತ್ತಿದ್ದರು. ಈ ಮಧ್ಯೆ ಪ್ರಕೃತಿ ತನ್ನ ಕಾರ್ಯದಲ್ಲಿ ಏರುಪೇರನ್ನು ಕಾಣು ತ್ತಿರಲಿಲ್ಲವಾದ್ದರಿಂದ ಕಾಲಕಾಲಕ್ಕೆ ವೇಳಾಪಟ್ಟಿಯಂತೆ ಕಾರ್ಯನಿರ್ವಹಿಸುತ್ತಿದ್ದವು. ಮೂಲಭೂತವಾಗಿ ಅತ್ಯವಶ್ಯಕವಾಗಿ ವ್ಯಕ್ತಿಗೆ ಬೇಕಾಗಿರುವ ಶುದ್ಧ ಗಾಳಿ, ಶುದ್ಧ ನೀರು ಮತ್ತು ಸತ್ವಯುತವಾದ ಆಹಾರ ಪಡೆಯುವ ಲಭ್ಯ ಇತ್ತು. ಆಗಲೇ ವರ್ಣಗಳು ಪ್ರಾರಂಭವಾಗಿದ್ದು. ಗುಹೆ ಗುಡಿಸಲು ಮುಂತಾದುವುಗಳ ಕಡೆ ವಾಸ ಮಾಡುತ್ತಾ ಪುಷ್ಟಪುಷ್ಟವಾಗಿದ್ದರೆಂಬುದನ್ನು ಕಾಣಬಹುದು. ಇದೇ ಸಂದರ್ಭಗಳಲ್ಲಿ ವೇದಗಳು ಮತ್ತು ಉಪನಿಷತ್ತುಗಳು ಬೆಳಗಲು ಪ್ರಾರಂಭಿಸಿದ್ದು. ವಿವಿಧ ರೀತಿಯ ಲಿಪಿಗಳ ಬರವ ಣಿಗೆಯ ಕಾರ್ಯಾರಂಭವಾಯಿತು. ಕಲಿಸಲು ಮತ್ತು ಕಲಿಯಲು ಆಸಕ್ತಿಯುಳ್ಳ ವ್ಯಕ್ತಿ ಗಳಿದ್ದರು. ಪ್ರತಿಯೊಂದಕ್ಕೂ ಅನ್ಯೋನ್ಯ ಸಂಬಂಧವಿತ್ತು. ಕ್ರಮೇಣ ವರ್ಣಗಳು ರಚಿ ತವಾದವು. ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂಬ ನಾಲ್ಕು ವರ್ಣಗಳು ರಚಿತ ವಾದವು. ಆಯಾವರ್ಣದವರು ಆಯಾಕಾರ್ಯದಲ್ಲಿ ತೊಡುಗುತ್ತಿದ್ದರೇ ವಿನಹ ಇವು ಕೀಳಜಾತಿ ಎಂಬ ಭಾವನೆಯಿಂದ ಮನಸ್ತಾಪತಂದು ಕೊಳ್ಳುತ್ತಿರಲಿಲ್ಲ.

## ವಿದ್ಯಾಭ್ಯಾಸ ನಡೆದು ಬಂದದಾರಿ :

ಕ್ರಮೇಣ ಕಲಿತವ್ಯಕ್ತಿ ಇನ್ನೊಬ್ಬರಿಗೆ ಕಲಿಸಬೇಕೆಂಬ ಹಂಬಲ ಹುಟ್ಟುತ್ತಾ ಬಂದಿತು. ಅದಕ್ಕಾಗಿ ಗುರುಕುಲವಾಸ, ಆಶ್ರಮವಾಸ, ಇತ್ಯಾದಿ ಕ್ರಮಗಳನ್ನು ಜಾರಿ ತಂದುಕೊಂಡರು. ಕಲಿಯಬೇಕಾದವರಿಗೆ ಈಗಿನಂತೆ ವೇಳಾಪಟ್ಟಿಯಿರಲಿಲ್ಲ. ತಮ್ಮ ಗೃಹ ಕೃತ್ಯದ ಕೆಲಸದ ಜೊತೆಗೆ ವಿದ್ಯಾಭ್ಯಾಸವೂ ನಡೆಸುವ ವ್ಯಕ್ತಿ ಗಳಿದ್ದರು. ಜ್ಞಾನಕ್ಕೆ ಮಾತ್ರ ಮಹತ್ವ ಕೊಡಲಾಗಿತ್ತು. ಇಂದಿನಂತೆ ವಿಜ್ಞಾನ, ಗಣಿ ಸಮಾಜಶಾಸ್ತ್ರ ಮತ್ತು ಭಾಷಾ ಬೆಳವಣಿಗೆಗೆ ಮಹತ್ವ ಕೊಡದಿದ್ದರೂ ಕಲಿಸಬೇಕಾ ಗಿರುವ ವಿಷಯವನ್ನು ತಮ್ಮ ಕೌಶಲ್ಯಗಳಿಂದ ಕಲಿಸಿ ಅವುಗಳನ್ನು ಪುನ : ಬಿತ್ತರಿಸು ವಂತೆ ಮಾಡುತ್ತಿದ್ದರು. ನಾವು ಇತ್ತೀಚೆಗೆ ಸಹ ಇಂತಹ ವ್ಯಕ್ತಿಗಳನ್ನು ಗಮನಿಸುತ್ತಿ ದ್ದೇವೆ. ಕಾಲಬದಲಾಗುತ್ತಾ ಶಿಕ್ಷಣದ ಕ್ರಮವನ್ನು ಸಹ ಬದಲಿಸುತ್ತಾ ಬರಬೇಕಾ ಬಂದಿತು. ಭಾರತದ ನೈಸರ್ಗಿಕ ಸಂಪತ್ತಿನಿಂದಾಗಿ ವಿದೇಶೀಯರು ನಮ್ಮ ಮೇಲೆ ದಾ ನಡೆಸುತ್ತಾ ನಮ್ಮನ್ನು ಆಳುವಷ್ಟರ ಮಟ್ಟಿಗೆ ನಮ್ಮ ದೇಶಕ್ಕೆ ಬಂದರು. ಕೆಲವು ಸಂದ ರ್ಭದಲ್ಲಿ ಜ್ಞಾನವಿದ್ದರೂ ಅದನ್ನ ಬಳಸಿಕೊಳ್ಳಲಾರದಷ್ಟು ಅಸಮರ್ಥರಾದ ದೆಸೆಯಿಂದ ನಮ್ಮಿಂದಲೇ ತಯಾರಾದ ಕೆಲವು ಅಂಶಗಳು ಬೇರೆ ರಾಷ್ಟ್ರಗಳಿಗೆ ತಲುಪಿ ಇವುಗಳ ಮೂಲಕ ಅನೇಕ ಮಾರ್ಪಾಡುಗಳನ್ನು ಮಾಡುತ್ತಾ ಪುನಃ ಅವರದೇ ಹೆಸರಿನಿಂದ ನಾವು ಅಭ್ಯಾಸ ಮಾಡುತ್ತಿರುವ ಪೈಥಾಗೊರಸನ ಪ್ರಮೇಯ, ನ್ಯೂಟನ್ನನ ನಿಯಮ ಮುಂತಾದುವುಗಳು ಹೆಸರುಗಳಿಸುವಂತಾಯಿತು. ಬ್ರಿಟೀಷರು ನಮ್ಮನ್ನು ಆಳುವ ಸಂದರ್ಭದಲ್ಲಿದ್ದ ಶಿಕ್ಷಣ ಪದ್ಧತಿಯೇ ಇಂದೂ ಸಹ ಮುಂದುವರಿಯುತ್ತಿರುವುದು ಶೋಚನೀಯ. ಶಿಕ್ಷಣ ತಜ್ಞ ಮೆಕಾಲೆ ಪದ್ಧತಿಯ ಪ್ರಕಾರ ಯಾವರೀತಿ ಇತ್ತೆಂಬು ದನ್ನು ಗಮನಿಸಿದರೆ, ನಮ್ಮ ದೇಶದವರೇ ವಿದೇಶಗಳಿಗೆ ಶಿಕ್ಷಣಕ್ಕಾಗಿ ಹೋಗಿ ಕಲಿತು ಬರುವಷ್ಟರ ಮಟ್ಟಿಗೆ ಇತ್ತು.

## ಕಿಂಡರ್‌ಗಾರ್ಡನ್, ಪೂರ್ವಪ್ರಾಥಮಿಕ ಮತ್ತು ಪ್ರಾಥಮಿಕ ಶಾಲೆಗಳು :

ಸ್ವಾತಂತ್ರ್ಯಾನಂತರ ನಮ್ಮ ದೇಶದಲ್ಲಿ ಶಿಕ್ಷಣವು ಪ್ರಾಥಮಿಕ ಒಂದನೇ ತರಗತಿ ಯಿಂದಲೇ ಇದ್ದು, ಇತ್ತೀಚೆಗೆ ಇನ್ನೂ ಹಿಂದಿನ ವರ್ಷ ತರಗತಿಗಳಿಂದಲೇ ತರಗತಿ ಅಭ್ಯಾಸ ಕ್ರಮ ನಡೆಯುತ್ತಿವೆ. 5 ವರ್ಷ 10 ತಿಂಗಳು ದಾಟಿದ ವಿದ್ಯಾರ್ಥಿಗಳು ಪ್ರಾಥ ಮಿಕ ಒಂದನೇ ತರಗತಿಗೆ ದಾಖಲಾಗಿ ನಂತರ 4 ವರ್ಷಗಳ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸ ನಂತರ 4 ವರ್ಷಗಳ ಮಾಧ್ಯಮಿಕ ಶಾಲೆ ವಿದಾಭ್ಯಾಸ ಇತ್ತು. ಹೆಚ್ಚು ಜನಸಂಖ್ಯೆಯುಳ್ಳ ಹಳ್ಳಿಗಳಲ್ಲಿ ಮಾತ್ರ ಶಾಲೆಗಳಿರುತ್ತಿದ್ದವು. ಕೆಲವು ಹಂತದ ವರೆಗೆ ಅಂದರೆ K.L.S. (Kannada Lower Secondary) ವರೆಗೆ

ಅಭ್ಯಾಸ ಮಾಡಿದವರೇ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಶಿಕ್ಷಕರಲ್ಲಿರಬೇಕಾದ ಎಲ್ಲಾ ಗುಣಗಳೂ ಅವರಲ್ಲಿತ್ತು. ಕಲಿಸುವ ಹಂಬಲ ಅವರಲ್ಲಿತ್ತು. ಆಸಕ್ತಿಯುಳ್ಳವರು ಮಾತ್ರ ಶಾಲೆಗೆ ಸೇರುತ್ತಿದ್ದರು. ನಿರ್ಬಂಧವಿರುತ್ತಿರಲಿಲ್ಲ. ಇಂತಹ ಶಾಲೆಗಳಲ್ಲಿ ಕಲಿತವರೇ ಡಾ|| ಸರ್ ಎಂ. ವಿಶ್ವೇಶ್ವರಯ್ಯನವರು, ಡಾ|| ಸರ್ ಸಿ.ವಿ. ರಾಮನ್, ವಿಜ್ಞಾನಿ ಜಗದೀಶ್ ಚಂದ್ರಬೋಸ್, ರವೀಂದ್ರನಾಥ ಟಾಗೂರ್‌ರಂತ ಸಾಹಿತಿ, ಸರೋಜಿನಿದೇವಿಯಂತಹ ಕವಯಿತ್ರಿ, ಗಾಂಧಿ ಮುಂತಾದ ಸ್ವಾತಂತ್ರ್ಯ ಹೋರಾಟಗಾರರು, ಶ್ರೀನಿವಾಸರಾಮಾನುಜಂ ನಂತಹ ಗಣಿತ ಶಾಸ್ತ್ರಜ್ಞರು ತರಗತಿಯ ಹೊರಗಡೆಯೇ ಪಾಠ ಕೇಳುತ್ತಾ ವಿದ್ಯಾಭ್ಯಾಸ ಮಾಡಿದ ಡಾ|| ಬಿ.ಆರ್. ಅಂಬೇಡ್ಕರ್ ಇತ್ಯಾದಿ.

**ಬದಲಾಗುತ್ತಿರುವ ಶಿಕ್ಷಣದ ಮನೋವೈಜ್ಞಾನಿಕ ಹಿನ್ನೆಲೆ:**

ಶಿಕ್ಷಣದ ಉದ್ದೇಶ ಮಕ್ಕಳ ವರ್ತನೆಯನ್ನು ಮಾರ್ಪಾಟು ಮಾಡುವುದು. ಯಾವ ರೀತಿ ಮಾರ್ಪಾಟು ಮಾಡಬೇಕೆಂಬುದಕ್ಕೋಸ್ಕರ ಅನೇಕ ವಿಧಾನಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ತಂದಿಡಲಾಗಿದೆ. ಮಗುವಿನ ಜ್ಞಾನದ ಬೆಳವಣಿಗೆ ಸುಮಾರು 6 ವರ್ಷಗಳಿಂದ ಪ್ರಾರಂಭವಾಗುತ್ತದೆಂದು ಮನಗಂಡು ಒಂದನೇ ತರಗತಿಗೆ ಪ್ರವೇಶ ದಾಖಲೆ ನಡೆಸುಲಾಗುತ್ತಿದ್ದು ಇಂದೂ ಸಹ ಅದೇ ನಡೆಯುತ್ತಿದೆ. ಆದರೆ ಅದ್ಯಾಂತ ಮುಂಚೆಯೇ ಇನ್ನೂ 3 ವರ್ಷಗಳಲ್ಲಿ ಮಗುವಿನ ಶಿಕ್ಷಣ ಪ್ರಾರಂಭವಾಗುತ್ತಿರುವುದು ಕೇವಲ ಅನುಕೂಲಸ್ಥರು ಹಾಗೂ ಪಟ್ಟಣವಾಸಿಗಳು ಹೆಮ್ಮೆಪಡುವಂತಹ ವಿಚಾರವಾದರೆ ಮಕ್ಕಳ ಕೌಶಲ್ಯ ಬೆಳವಣಿಗೆಗೆ ಮಾತ್ರ ಮಹತ್ವ ಕೊಡಬಹುದು. ಪೂರ್ವ ಪ್ರಾಥಮಿಕ ತರಗತಿಗಳು ಮತ್ತು ಆದಕ್ಕಿಂತ ಮುಂಚೆ ಶಾಲೆಯಲ್ಲಿ ಮಕ್ಕಳು ಏನನ್ನು ಕಲಿಯಬಹುದೆಂದರೆ, ಕೆಲವು ಅಕ್ಷರಗಳು, ಪದಗಳು, ಉಚ್ಚಾರಣೆ, ಮತ್ತು ಜ್ಞಾನೇಂದ್ರಿಯಗಳಿಗೆ ಸಂಬಂಧಪಟ್ಟ ಕೌಶಲ್ಯಗಳ ಬೆಳವಣಿಗೆಗೆ ಸಹಾಯ ಮಾಡುವಂತಹ ಅಂಶಗಳು.

**ತಾಯಿ ಗರ್ಭವಾಸದಲ್ಲಿನ ಶಿಕ್ಷಣ :**

ನಮಗೆಲ್ಲರಿಗೂ ತಿಳಿದಿರುವಂತೆ ನಮ್ಮ ಕಣ್ಣೆದುರಿಗೆ ಕಾಣುತ್ತಿರುವ ಅನೇಕ ವ್ಯಕ್ತಿಗಳ ವ್ಯಕ್ತಿತ್ವದ ಚಿತ್ರಣವು ಆ ವ್ಯಕ್ತಿಗಳು ಜನಿಸುವುದಕ್ಕೆ ಮುಂಚೆ ಅವರ ತಂದೆ ತಾಯಂದಿರುಗಳ ವ್ಯಕ್ತಿತ್ವ ರಾಮಾಯಣ ಮಹಾಭಾರತಗಳಾದಿಯಾಗಿ ಅವುಗಳಲ್ಲಿ ಕಂಡುಬರುವ ಅನೇಕ ವ್ಯಕ್ತಿಗಳ ಹಿನ್ನೆಲೆ ಅವರ ಜೀವಿತಾವಧಿಗೆ ಮುನ್ನವೇ ಎಷ್ಟೋ ರೂಪವನ್ನು ತಾಳಿದ್ದಿತು ಎಂದು ಮನೋವಿಜ್ಞಾನಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಅಭಿಮನ್ಯು, ಪ್ರಹ್ಲಾದ, ವಿವೇಕಾನಂದ, ಗಣಿತ ಶಾಸ್ತ್ರಜ್ಞ ಶ್ರೀನಿವಾಸ ರಾಮಾನುಜಂ ಮುಂತಾದ ವ್ಯಕ್ತಿಗಳ ತಾಯಿ ತಂದೆಯರು ಯಾವ ರೀತಿ ಇದ್ದಾರೆಂ

ಬುದನ್ನು ಗಮನಿಸಿದರೆ ಇವರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತಿರುವುದನ್ನು ಗಮನಿಸಬಹುದು. ಮಕ್ಕಳನ್ನು ಪಡೆಯುವ ಹಂಬಲದಿಂದಾಗಿ ವಿಶೇಷ ಪೂಜೆ, ಯಜ್ಞ ಯಾಗಾದಿಗಳನ್ನು ನಿಷ್ಠಾವಂತ ಕಾರ್ಯಕ್ರಮಗಳನ್ನು ಪಡೆದು ಅದರ ಪರಿಣಾಮ ವಾಗಿ ಇಂತಹ ವ್ಯಕ್ತಿಗಳು ಪ್ರಪಂಚದಲ್ಲಿ ಉದಯಿಸಿ ಸಾರ್ಥಕತೆಯನ್ನು ಕಂಡುಕೊ ಳ್ಳಬಹುದಾಗಿತ್ತು. ಇಂದು ಇಂತಹ ವ್ಯಕ್ತಿಗಳ ಪ್ರಭಾವದಿಂದಲೇ ಇಂದು ನಾವು ನಮ್ಮ ರಾಷ್ಟ್ರದ ಹಿರಿಮೆಯನ್ನು ಎತ್ತಿಕೊಂಡಾಡಬಹುದಲ್ಲವೆ ? ಹಳ್ಳಿಯೇ ಆಗಲಿ ಪಟ್ಟಣವೇ ಆಗಲಿ, ಅವರು ಬೆಳೆಯುವ, ಬೆಳೆಸುವ ಮತ್ತು ತಂದೆ ತಾಯಿಯರ ಪ್ರಭಾವವೇ ಹೆಚ್ಚೆಂಬುದನ್ನು ಕಾಣಬಹುದು. ಒಳ್ಳೇ ಸಂಸ್ಕಾರ ಹೊಂದಿರುವ ಮಕ್ಕ ಳನ್ನು ಪಡೆಯುವ ಲಭ್ಯವಿರುತ್ತದೆ ಎಂಬುದನ್ನು ಗಮನಿಸಿ ಇಂದಿನ ವ್ಯಕ್ತಿಗಳಲ್ಲಿ ಏಕೆ ಇಂತಹ ಗುಣಗಳನ್ನು ಪಡೆಯಬಾರದು ? ಆದ್ದರಿಂದ ಇಂದು ಶಿಶುವನ್ನು ಹೊತ್ತಿರುವ ತಾಯಂದಿರು ಯಾವ ಯಾವ ಮನೋಭಾವವನ್ನು ಹೊಂದಿರುತ್ತಾರೆ ಮತ್ತು ಯಾವ ಯಾವ ವ್ಯಾಮೋಹಕ್ಕೆ ಒಳಗಾಗುತ್ತಾರೆಯೋ ಮಕ್ಕಳಲ್ಲಿ ಮೂಡಿರು ವುದರಿಂದಲೇ ಇಂದು ಮಕ್ಕಳಲ್ಲಿ ಸರಿಯಾದ ಮನೋಭಾವವನ್ನು ಬದಲಿಸಲು ಕಷ್ಟ ವಾಗುತ್ತದೆ. ಇದರ ಬಗ್ಗೆ ಗಮನವಿಡುವವರು ಎಷ್ಟು ಮಂದಿ ? ಭವಿಷ್ಯದ ಬಗ್ಗೆ ಗಮನ ವಿಡಬೇಕು. ಇದರ ಪ್ರಕಾರ ತಂದೆತಾಯಿಯವರ ಅನುವಂಶೀಯ ಗುಣ ಮಕ್ಕಳ ಮೇಲೆ ಪರಿಣಾಮ ಬೀರುತ್ತದೆ.

**ತರಗತಿಗಳ ಅಭ್ಯಾಸದಲ್ಲಿ ಶಿಕ್ಷಕರ ಪಾತ್ರ :**

ಶಿಕ್ಷಕರ ವ್ಯಕ್ತಿತ್ವವನ್ನು ಮತ್ತು ಗುಣಗಳನ್ನು ಸ್ವಾಮಿ ವಿವೇಕಾನಂದರು ಈ ರೀತಿ ವ್ಯಕ್ತಪಡಿಸಿದ್ದಾರೆ. ಶಿಕ್ಷಕರು ಪೂರ್ವಭಾವಿಯಾಗಿ ಹಿಂದಿನ ಗಣ್ಯವ್ಯಕ್ತಿಗಳ ಬಗ್ಗೆ ಜ್ಞಾನ ಹೊಂದಿರಬೇಕು. ಪ್ರಪಂಚದ ಪ್ರತಿಯೊಬ್ಬರೂ ಬೈಬಲ್, ವೇದ ಗಳು, ಕುರಾನ್ ಮುಂತಾದ ಗ್ರಂಥಳಿಂದ ಕೇವಲ ಪದಗಳು, ವಾಕ್ಯಗಳು, ಗ್ರಂಥಗಳು ಮತ್ತು ಸಿದ್ಧಾಂತಗಳನ್ನು ಓದಬಹುದು. ಇವೆಲ್ಲವೂ ಧರ್ಮದ ಶುಷ್ಕ ಹಸ್ತಿಗಳಂತೆ. ಇವುಗಳಿಂದ ಶಿಕ್ಷಕರು ಕೇವಲ ಹೇಳಿಕೆಯ ರೂಪದಲ್ಲಿ ಹೇಳುವುದರ ಬದಲು ವ್ಯಕ್ತಿ ಗಳ ವಿಚಾರವನ್ನೇ ಆದರ್ಶವಾಗಿಟ್ಟುಕೊಂಡು ಮಕ್ಕಳಲ್ಲಿ ಹೆಚ್ಚಾಗಿ ಒಂದೇ ಸಾರ ವನ್ನು ಕೊಡುವ ಒಟ್ಟು ಧರ್ಮಗ್ರಂಥಗಳ ಅಭಿಪ್ರಾಯ ಸೂಚಿಸಬೇಕು. ಶಿಕ್ಷಕರು 'ಪಾಪ'ಬುದ್ಧಿಯುಳ್ಳವರಾಗಿರಬಾರದು. ಇಲ್ಲಿ 'ಪಾಪ' ಎಂದರೆ ಹಿಂಸೆ. ಶಿಕ್ಷಣ ತಜ್ಞರ ಅಭಿಪ್ರಾಯದ ಪ್ರಕಾರ, ಶಿಕ್ಷಕ ಮತ್ತು ಕಟುಕ. [Teacher and Butcher) A butcher is a man who is killing a animal per day for his survival but teachers are the butchers who are killing hundreds of animals per day if they fail to do their duties. ಕಟುಕ ಜೀವನಕ್ಕಾಗಿ ಒಂದು ಪ್ರಾಣಿಯನ್ನು

ಕತ್ತರಿಸಿ, ಇತರರಿಗೆ ಆಹಾರಕ್ಕಾಗಿ ತನ್ನ ಕಾರ್ಯವನ್ನು ಮುಂದುವರಿಸುತ್ತಿರುತ್ತಾನೇ ಹೊರತು, ಇಲ್ಲಿ ಪಾಪದ ಅಂಶ ಅಷ್ಟಾಗಿ ಕಂಡುಬರುವುದಿಲ್ಲ, ಶಿಕ್ಷಕನೇನಾದರೂ ಲೋಪ ಮಾಡಿದರೆ ಅದಕ್ಕಾಗಿ ಪ್ರಾಯಶ್ಚಿತ್ತವಿಲ್ಲ. ಶಿಕ್ಷಕರು ಪವಿತ್ರವಾಗಿರಬೇಕು. ಶಾಲೆಯನ್ನು ದೇವಾಲಯವೆಂದೂ ಮಕ್ಕಳನ್ನು ದೇವರೆಂದೇ ಪರಿಗಣಿಸಬೇಕು. ಅದ ರಲ್ಲೂ ಪ್ರಾಥಮಿಕ ಶಿಕ್ಷಕರು ಒಳ್ಳೆಯ ಮನೋಭಾವವುಳ್ಳ ವ್ಯಕ್ತಿತ್ವವುಳ್ಳವಾಗಿರಬೇಕು.

**ಶಿಕ್ಷಕರ ವ್ಯಕ್ತಿತ್ವ :**

ನಮ್ಮ ಹಿಂದಿನ ದಿನಗಳಲ್ಲಿ ಶಿಕ್ಷಕರು ಹೇಗಿದ್ದರೆಂಬುದನ್ನು ಗಮನಿಸಿದರೆ ಈಗಿನ ವಿದ್ಯಾರ್ಥಿಗಳ ಮುಂದೆ ವರ್ಣಿಸಲು ಸಾಧ್ಯವಾಗುವುದಿಲ್ಲ. ಅದೆಲ್ಲಾ ಕನಸು ಅಥವಾ ಕಥೆಗಳ ರೂಪದಲ್ಲಿರುತ್ತವೆ, ಎಷ್ಟೋ ಸಂದರ್ಭಗಳಲ್ಲಿ ಕೆಲವು ಒಳ್ಳೆಯ ಮನೋಭಾವವುಳ್ಳ ವ್ಯಕ್ತಿಗಳ ಕೈಕೆಳಗೆ ಅಭ್ಯಾಸ ಮಾಡಿರುವುದನ್ನು ಸ್ಮರಿಸಿಕೊಂಡರೆ ಸಾಕು ವಿಷಯವೇ ಜ್ಞಾಪಕಕ್ಕೆ ಬರುತ್ತವೆ. ಇಲ್ಲಿ ವ್ಯಕ್ತಿತ್ವ ಬಹಳ ಮುಖ್ಯ. ಕಲಿಸಲೇಬೇಕೆಂಬ ಮನೋಭಾವವುಳ್ಳ ಶಿಕ್ಷಕರಿದ್ದರು. ಹೂವಿಗೆ ವಾಸನೆ ಇದ್ದಂತೆ ವ್ಯಕ್ತಿಗೆ ವ್ಯಕ್ತಿತ್ವ ಇದ್ದಂತೆ ಮಕ್ಕಳಲ್ಲಿ ಶುದ್ಧಚಾರಿತ್ರ್ಯ ಮತ್ತು ಒಳ್ಳೆಯ ವ್ಯಕ್ತಿತ್ವ ವನ್ನು ಚಿಕ್ಕಂದಿನಿಂದಲೇ ಬೆಳೆಸುವಂತಹ ಶಿಕ್ಷಕರಿರಬೇಕು. ಆದರೆ ಇಂದು ಅದರ ಅಭಾವವೇ ಎದ್ದು ಕಾಣುತ್ತಿದೆ. ಶೀಲ ಬೆಳವಣಿಗೆಯೇ ಶಿಕ್ಷಣದ ಮೂಲ ಉದ್ದೇಶ ವಾಗಿದೆ. ಅದನ್ನು ಕಾಪಾಡುವವರು ಎಷ್ಟು ಮಂದಿ ?

**ಅಮೇರಿಕಾದ ಅಂದಿನ ಅಧ್ಯಕ್ಷ ಕೆನಡಿಯವರ ಉತ್ತರ**

ಒಮ್ಮೆ ಚಕ್ರವರ್ತಿ ರಾಜಗೋಪಾಲಚಾರಿ (ರಾಜಾಜಿ) ಅಮೇರಿಕಾಕ್ಕೆ ಭೇಟಿ ಕೊಡಬೇಕಾದ ಸಂದರ್ಭ ಒದಗಿತ್ತು. ಆಗ ಅವರು ಆಗ ಅಧ್ಯಕ್ಷರಾಗಿದ್ದ ಜಾನ್. ಎಫ್. ಕೆನಡಿಯವರನ್ನು ಭೇಟಿಮಾಡಿ ಆ ರಾಷ್ಟ್ರದ ಹಿರಿಮೆಯ ಬಗ್ಗೆ ಮಾತನಾಡುತ್ತಾ, ನಿಮ್ಮ ರಾಷ್ಟ್ರವು ಮುಂದುವರಿದ ರಾಷ್ಟ್ರವೇಸರಿ. ಇಲ್ಲಿನ ಶಿಕ್ಷಣ ಪದ್ಧತಿಯಿಂದಲೋ ಅಥವಾ ಬೇರೆ ಯಾವುದಾದರೂ ಸಂಪನ್ಮೂಲಗಳಿಂದಲೋ, ಎಂದು ಕೇಳಿದಾಗ, ಕೆನಡಿಯವರ ಉತ್ತರ ಈರೀತಿ ಇತ್ತು. Our country is a developed one because, it is not due to the good Engineers, or doctors, or States man or Scientists, it is due to the teachers. Every teachers of America are under the impression that they are preparing future presidents of the Nation. ಇದನ್ನೇ ರಾಜಾಜಿಯವರು ನಮ್ಮ ರಾಷ್ಟ್ರದ ಶಿಕ್ಷಕರಲ್ಲಿ ಈ ಭಾವನೆ ಏಕೆ ಮೂಡಬಾರದು ಎಂಬುದನ್ನು ಮನಸ್ಸಿನಲ್ಲಿ ಊಹಿಸಿ

ಕೊಂಡವರು ಅದು ಹಾಗೆಯೇ ಉಳಿಯಿತೇ ವಿನಃ ಯಾರೂ ಮಾರ್ಪಾಟು ಮಾಡ ಲಾಗುತ್ತಿಲ್ಲ. ಈ ಅಂಶಗಳು ಹೇಗೆಂದರೆ, ವ್ಯಕ್ತಿಗಳನ್ನು ಉತ್ಪತ್ತಿಮಾಡಬಹುದ ಆದರೆ ವ್ಯಕ್ತಿತ್ವವನ್ನು ಬೆಳೆಸಬೇಕಾದರೆ, ನಿಜದ ವ್ಯಕ್ತಿತ್ವವುಳ್ಳ ಶಿಕ್ಷಕರೇ ಇರಬೇಕ ಕಲ್ಲಿನಿಂದ ವಿಗ್ರಹಗಳನ್ನು ತಯಾರುಮಾಡಬಹುದಾದ ಶಿಲ್ಪಿ ಪುನಃ ಜೀರ್ಣೋದ್ಧಾ ಮಾಡಿದ ನಂತರ ಮಾತ್ರ ಅದರಲ್ಲಿ ಶಕ್ತಿ ತುಂಬಬಹುದೆಂಬುದನ್ನು ವಿಗ್ರಹ ರಚನಾಕಾರ ಶಿಲ್ಪಿಯೇ ಕಲ್ಪಿಸಿಕೊಂಡಿರುತ್ತಾನೆ.

**ಮಕ್ಕಳಲ್ಲಿ ರೂಪಿಸಬೇಕಾದ ಶಕ್ತಿ ಶಿಕ್ಷಕರಲ್ಲಿರಬೇಕು :**

ಡಾ|| ರಾಧಾಕೃಷ್ಣನ್ ಹೇಳಿರುವಂತೆ ಮಕ್ಕಳ ಮನಸ್ಸು ಬಹಳ ಶುಭ್ರವಾದ ಒಂದು ಗಾಜಿನ ಫಲಕ. ಇದರ ಮೇಲೆ ಏನೇ ಮುದ್ರೆ ಒತ್ತಿದರು ಎದ್ದು ಕಾಣುತ್ತದೆ. ಇಂತಹ ಮನಸ್ಸಿನಲ್ಲಿ ಯಾವರೀತಿ ಮುದ್ರೆ ಒತ್ತುವಂತಹ ಸನ್ನಿವೇಶಗಳನ್ನು ಶಿಕ್ಷಕರು ನಿರ್ಮಿಸಬೇಕೆಂಬುದನ್ನು ಗಮನಿಸುತ್ತಾ ಸಂದರ್ಭ, ಸನ್ನಿವೇಶ, ಪರಿಸರ ಮುಂತಾದ-ವುಗಳನ್ನು ಮನಸ್ಸಿನಲ್ಲಿಟ್ಟು ಕಲಿಸಬೇಕು ಮತ್ತು ರೂಪಿಸಬೇಕು. ಒಬ್ಬ ಬಡಗಿ ಮರದ ವಸ್ತುಗಳನ್ನು ಬಳಸಿ ಏನನ್ನು ಮಾಡಬೇಕೆಂಬ ಕಲ್ಪನೆಯನ್ನು ಇಟ್ಟು ಉದ್ದೇಶಕ್ಕನುಗುಣವಾಗಿ ತನ್ನ ಕೌಶಲ್ಯವನ್ನ ಬಳಸಿಕೊಂಡು ತಯಾರುಮಾಡುತ್ತಾನೆಯೋ, ಮಣ್ಣಿನರಚನೆಗನುಗುಣವಾಗಿ ಕುಂಬಾರ, ಕಲಾಕಾರ, ಮನೆಕಟ್ಟುವವನು, ರೈತ, ಇಟ್ಟಿಗೆ ಹಾಕುವವನು ತಕ್ಕಂತೆ ಆರಿಸಿಕೊಂಡು ಯಾವರೀತಿ ಬಳಸಿಕೊಳ್ಳುತ್ತಾ-ನೆಯೋ ಅದೇರೀತಿ, ಎಲ್ಲೋಬಿದ್ದಿರುವ ಕಲ್ಲನ್ನು ತಂದು ಶಿಲ್ಪಿಯು ಅದಕ್ಕೆ ಅಂದವಾದ ಆಕಾರಕೊಟ್ಟು ಸಾವಿರಾರು ಜನರನ್ನು ಆಕರ್ಷಿಸುವಂತೆ ಮಾಡುವಂತೆ, ಕಲ್ಲಿನರಚನೆ-ಗನುಗುಣವಾಗಿ ಅವುಗಳನ್ನು ಬಳಸುವಂತೆ ಪ್ರೇರೇಪಿಸುವುದು, ಇದೇರೀತಿ ಬೇರೆಬೇರೆ ಮನೋಭಾವವುಳ್ಳ ಮಕ್ಕಳನ್ನು ಒಂದು ತರಗತಿಯಲ್ಲಿ ಗಮನಿಸುತ್ತಾ ವ್ಯಕ್ತಿ ಅಧ್ಯ-ಯನ ನಡೆಸುತ್ತಾ (Case Study) ಅವರ ಮನೋಭಾವಗಳಿಗನುಗುಣವಾಗಿ ಮಾರ್ಪಾಟು ಮಾಡುವ ಶಿಲ್ಪಿಯಂತೆ ಶಿಕ್ಷಕನು ಕಾರ್ಯ ತತ್ಪರತೆಯನ್ನು ಹೊಂದಿರಬೇಕು. ಇಂದು ನಾವು ಕಾಣುತ್ತಿರುವ ಸನ್ನಿವೇಶಗಳನ್ನು ಗಮನಿಸಿದರೆ, ಸಂಸ್ಕೃತಿ-ಯನ್ನೇ ಕಳೆದುಕೊಳ್ಳುತ್ತಿರುವ ಶ್ರೀಮಂತ ಮಕ್ಕಳು, ಶಾಲೆಗೆ ಹೋಗುವಾಗ ಮಕ್ಕಳಲ್ಲಿ ಮೂಡುತ್ತಿರುವ ಮನೋಭಾವ ಮತ್ತು ಗುರುಹಿರಿಯರನ್ನು ಗುರುತಿಸಿ ಅದಕ್ಕನುಗುಣವಾದ ಸಂಸ್ಕೃತಿಯನ್ನು ರಚಿಸುವಲ್ಲಿ ಶಿಕ್ಷಕರು ಮತ್ತು ಪೋಷಕರು ಜವಾಬ್ದಾರಿಯನ್ನು ಹೊತ್ತಿರಬೇಕಾಗುತ್ತದೆ. ನಾಗರಿಕತೆಯು ಆಂತರಿಕ ರಚನೆಗೆ ಸಹಕಾರಿಯಲ್ಲವೆಂದೂ ಸಂಸ್ಕೃತಿಯೇ ನಿಜವಾದ ವ್ಯಕ್ತಿತ್ವದಲ್ಲಿ ಪಾತ್ರವಹಿಸುವುದೆಂಬುದನ್ನು ಪ್ರಾಥಮಿಕ ಮತ್ತು ಅದಕ್ಕಿಂತಲೂ ಕೆಳ ಶಾಲೆಗಳಲ್ಲಿನ ಶಿಕ್ಷಣದಲ್ಲಿ ಹೇಳಿಕೊಡಬೇಕು. ವಚನಗಳು, ಶರಣರಸಾಹಿತ್ಯ, ನೀತಿಯುತ ಕಥೆಗಳು, ಭಗವದ್ಗೀತೆ, ರಾಮಾಯಣ ಮಹಾಭಾರತದ ಕಥೆಗಳನ್ನೊಳಗೊಂಡ ವ್ಯಕ್ತಿತ್ವ ನಿರ್ಮಾಣಕ್ಕೆ ಸಹಕಾರಿಯಾಗುವ ವಿಷಯಗಳ

ಬೋಧನೆಗೆ ಮಹತ್ವ ಕೊಡಬೇಕು. ಇದನ್ನು ಪಠ್ಯಕ್ರಮದಲ್ಲಿಟ್ಟಿಲ್ಲವೆಂಬುದನ್ನು ಪರಿಗಣಿಸದೆ, ಪ್ರತ್ಯೇಕವಾಗಿ ಬೋಧಿಸಲಾಗದಿದ್ದರೂ ಪಾಠದ ಜೊತೆಯಲ್ಲಿಯೇ ಸನ್ನಿವೇಶ ಒದಗಿಸಿಕೊಂಡು ಹೇಳುವುದು ಹೆಚ್ಚು ಪರಿಣಾಮಕಾರಿಯಾಗುತ್ತದೆ ಮತ್ತು ವ್ಯಕ್ತಿತ್ವ ನಿರ್ಮಾಣಕ್ಕೆ ಸಹಕಾರಿಯಾಗುತ್ತದೆ. ಪ್ರಾಥಮಿಕ ತರಗತಿಗಳಲ್ಲಿನ ಶಿಕ್ಷಕರ ಜವಾಬ್ದಾರಿ ಮಗುವಿನ ಹೆಚ್ಚು ಪರಿಣಾಮಕಾರಿಯಾಗುತ್ತದೆಂಬುದಕ್ಕೆ ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವಗಳನ್ನೇ ಸ್ಮರಿಸಿದರೆ ಮನದಟ್ಟಾಗುತ್ತದೆ. ಪ್ರಾಥಮಿಕ ತರಗತಿಗಳಲ್ಲಿ ತಂದೆ ತಾಯಿಗಳು ಅಕ್ಕರೆಯಿಂದ ಹೇಳಿಕೊಡುತ್ತಿದ್ದ ಕೆಲವು ನೀತಿ ಪದ್ಯಗಳು ಇನ್ನೂ ನಮ್ಮ ಮನಸ್ಸಿನ ಮೇಲೆ ಉಳಿದಿರುವುದು ಸಾಕ್ಷಿಯಾಗಿದೆ. ಒಂದು ಪದ್ಯ ಜ್ಞಾಪಕಕ್ಕೆ ಬರುತ್ತದೆ.

ಮಕ್ಕಳಿಗೆ ತಂದೆ ಬಾಲ್ಯದೊಳ
ಕ್ಕರ ವಿದ್ಯೆಯನು ಕಲಿಸದಿರ್ದೊಡೆ ಕೊಂದಂ।
ಲಕ್ಕ ಧನವಿರಲುಕೆಡುಗುಂ
ಚಿಕ್ಕಂದಿನ ವಿದ್ಯೆ ಪೊರಗು ಚೂಡಾರತ್ನ " (ಮುಂದುವರಿಯುತ್ತದೆ)

---

## ಭಾರತೀಯ ಅಂಚೆ ಇಲಾಖೆಯ—ಒಂದು ಪ್ರಕಟಣೆ

## : ದಯವಿಟ್ಟು ಗಮನಿಸಿರಿ :

ಭಾರತೀಯ ಅಂಚೆ ಇಲಾಖೆಯು ರಿಜಿಸ್ಟರ್ಡ್ ಪತ್ರಗಳ ಬಟವಾಡೆಗೆ ಒಂದು ಹೊಸ ಸೌಲಭ್ಯವನ್ನು ಜಾರಿಗೊಳಿಸಿದೆ.

ಒಂದು ರಿಜಿಸ್ಟರ್ಡ್ ಪತ್ರವು ಬಂದ ಕೂಡಲೇ ಅದನ್ನು ಬಟವಾಡೆಗಾಗಿ ಎರಡು ದಿನಗಳು ಪೋಸ್ಟ್‌ಮೆನ್ ಮೂಲಕ ಕಳುಹಿಸಲಾಗುತ್ತದೆ. ಒಂದು ವೇಳೆ ಬಟವಾಡೆಗಾಗಿ ರಿಜಿಸ್ಟರ್ಡ್ ಪತ್ರವನ್ನು ತಂದ ಮೊದಲನೆಯ ದಿನ ವಿಳಾಸದಾರನು ಸಿಗದಿದ್ದರೆ ರಿಜಿಸ್ಟರ್ಡ್ ಪತ್ರ ಬಂದಿರುವ ಬಗ್ಗೆ ಹಾಗೂ ಅದನ್ನು ಮರುದಿನವೂ ಬಟವಾಡೆಗೆ ತರುವ ಬಗ್ಗೆ ಒಂದು ತಿಳುವಳಿಕೆ ಪತ್ರವನ್ನು ಕೊಡಲಾಗುತ್ತದೆ. ನಂತರ ವಿಳಾದಾರನು ಮರುದಿನ ತಾನೇ ರಿಜಿಸ್ಟರ್ಡ್ ಪತ್ರವನ್ನು ಪಡೆಯಬಹುದು. ಅಥವ ಮನೆಯಲ್ಲಿರುವ ಯಾರನ್ನಾದರೂ ರಿಜಿಸ್ಟರ್ಡ್ ಪತ್ರ ಪಡೆಯಲು ನಿಯಮಿಸಬಹುದು. ಈ ಎರಡೂ ದಿನಗಳಲ್ಲಿ ವಿಳಾಸದಾರನು ಇಲ್ಲದಿದ್ದ ಪಕ್ಷದಲ್ಲಿ ಆ ರಿಜಿಸ್ಟರ್ ಪತ್ರವನ್ನು ಮುಂದಿನ ಐದು ದಿನಗಳವರೆಗೆ ಅಂಚೆ ಕಛೇರಿಯಲ್ಲಿ ಡೆಪಾಸಿಟ್ ಇಡಲಾಗುವುದು. ಈ ಅವಧಿಯಲ್ಲಿ ವಿಳಾಸದಾರನು ಅಂಚೆ ಕಛೇರಿಗೆ ಬಂದು ತನ್ನ ಪರಿಚಯವನ್ನು ಡ್ರೈವಿಂಗ್ ಲೈಸೆನ್ಸ್ ಅಥವ ಐಡೆಂಟಿಟಿ ಕಾರ್ಡುಗಳ ಮೂಲಕ ನಿರೂಪಿಸಿ ರಿಜಿಸ್ಟರ್ಡ್ ಪತ್ರವನ್ನು ಪಡೆಯಬಹುದು. ಈ ಅವಧಿಯಲ್ಲಿ ವಿಳಾಸದಾರನು ರಿಜಿಸ್ಟರ್ಡ್ ಪತ್ರವನ್ನು ಪಡೆಯದಿದ್ದರೆ ಅದನ್ನು ಸೂಕ್ತ ಷರಾದೊಂದಿಗೆ ರಿಜಿಸ್ಟರ್ಡ್ ಪತ್ರವನ್ನು ಕಳುಹಿಸಿದವರಿಗೆ ಹಿಂದಿರುಗಿಸಲಾಗುವುದು.

—ಮುಖ್ಯ ಪೋಸ್ಟ್ ಮಾಸ್ಟರ್ ಜನರಲ್, ಬೆಂಗಳೂರು.

# ಶಿಕ್ಷಕರಲ್ಲಿ ಹಾಸ್ಯ ಪ್ರವೃತ್ತಿ

-ಬಿಂಡಿಗನವಿಲೆ ಭಗವಾನ್, ಪ್ರಾಂಶುಪಾಲರು, ಶ್ರೀ ಕೊಂಗಾಡಿಯಪ್ಪ ಪದವಿ ಪೂರ್ವ ಕಾಲೇಜು
ದೊಡ್ಡಬಳ್ಳಾಪುರ – 561203.

---

ಯಾವುದೇ ರಾಷ್ಟ್ರ ಪ್ರಗತಿಪಥದಲ್ಲಿರಬೇಕಾದರೆ ಅಲ್ಲಿನ ಶಿಕ್ಷಕರ ಪಾತ್ರ ಮಹತ್ತ್ವಪೂರ್ಣ ನಿರ್ಣಾಯಕ. ದೇಶ ಉದ್ಧಾರಕ್ಕೆ ಮರಬೆಳೆಸು, ಪೀಳಿಗೆ ಏಳಿಗೆಗೆ ಶಿಕ್ಷಣ ನೀಡು ಎಂಬ ನುಡಿಯುಂಟು. ತನ್ನ ಕರ್ತವ್ಯವನ್ನು ಸಾಂಗವಾಗಿ ಶಿಕ್ಷಕ ಪೂರೈಸಲು ಆತನಲ್ಲಿ ಆತ್ಮವಿಶ್ವಾಸ, ಪ್ರಾಮಾಣಿಕ ಕಾಳಜಿ, ಮುಂದಿನ ಜನಾಂಗ ವೊಂದನ್ನು ತಾನು ರೂಪಿಸುತ್ತಿದ್ದೇನೆಂಬ ಅನನ್ಯ ಪ್ರಜ್ಞೆ ಮೈಗೂಡಿರಬೇಕು. ಬೋಧನೆ ಎಂದರೆ ಕೇವಲ ಶಿಕ್ಷಕರು ಬರೆದುಕೊಂಡುಬರುವ ನೋಟ್ಸ್ ಅಥವಾ ಟಿಪ್ಪಣಿ ವಿದ್ಯಾರ್ಥಿಗಳ ಟಿಪ್ಪಣಿಯಾಗಿ ಮಾರ್ಪಡುವ ಪ್ರಕ್ರಿಯೆಯಲ್ಲ. ತರಗತಿ ಶಿಕ್ಷಕ-ವಿದ್ಯಾರ್ಥಿಗಳ ಪರಸ್ಪರ ಸಂವಾದದ ವಲಯವಾಗುವುದು ಆದರ್ಶ. ಸರ್ವದಾ ಗಂಟು ಮೋರೆ ಹಾಕಿಕೊಂಡು ಪಾಠ, ಪ್ರವಚನಗಳಲ್ಲಿ ಶಿಕ್ಷಕ ನಿರತನಾದರೆ ಯಾರು ತಾನೆ ಆತನನ್ನು ಮೆಚ್ಚಿಕೊಂಡಾರು. ಗಂಭೀರ ವಿನೋದ ಪ್ರವೃತ್ತಿ, ಮುಗುಳ್ನಗೆ ಶಿಕ್ಷಕನ ವ್ಯಕ್ತಿತ್ವವನ್ನು ಮೆರುಗುಗೊಳಿಸುತ್ತದೆ, ಆತನ ಪಾಂಡಿತ್ಯಕ್ಕೆ ಕಳಶವಿಟ್ಟಂತೆ ಶೋಭೆ ತರುತ್ತದೆ. ನಾಗರಿಕ ಹಾಸ್ಯಮನೋಭಾವ ಪ್ರತಿಯೊಬ್ಬ ಶಿಕ್ಷಕನಿಗೂ ಅಗತ್ಯ, ಅನಿವಾರ್ಯ. ಸಮಯ ಪ್ರಜ್ಞೆಯಿಂದ ಶಿಕ್ಷಕರು ಎಂಥಹ ಜಟಿಲ ಸನ್ನಿವೇಶವನ್ನು ತಿಳಿಗೊಳಿಸಿಯಾರೆಂಬುದಕ್ಕೆ ಕೆಲವು ನಿದರ್ಶನಗಳು ಸ್ವಾರಸ್ಯಕರವಾಗಿವೆ.

ಅವರು ಹೊಸದಾಗಿ ಬಂದಿದ್ದ ಉಪನ್ಯಾಸಕರು. ಇನ್ನೂ ತರುಣರು. ತರಗತಿಯಲ್ಲಿ ಹುಡುಗರು ಗದ್ದಲ ಮಾಡಿದಾಗ ಕೋಪದಿಂದ ನಿಮ್ಮಲ್ಲಿ ಅರ್ಧಕ್ಕರ್ಧ ಮಂದಿ ಮೂರ್ಖರು ಎಂದುಬಿಟ್ಟರು. ಸರಿ, ಆ ತರಗತಿಯೇ ಮುಷ್ಕರಕ್ಕಿಳಿಯಿತು. ಪ್ರಾಂಶುಪಾಲರ ಬಳಿ ಬಂದು ಆ ಉಪನ್ಯಾಸಕರು ಆಡಿದ ಮಾತನ್ನು ಹಿಂತೆಗೆದುಕೊಂಡು ಕ್ಷಮೆ ಯಾಚಿಸಬೇಕೆನ್ನುವುದು ಅವರ ಬೇಡಿಕೆ. ಆ ತರುಣ ಉಪನ್ಯಾಸಕರು ಕೊಂಚವೂ ವಿಚಲಿತರಾಗದೆ ತಾವಾಗಿಯೆ "ಖಂಡಿತ ನಿಮ್ಮ ಕ್ಷಮೆ ಕೋರುತ್ತೇನೆ. ನಾ ಆಡಿದ್ದು ತಪ್ಪು, ನಿಮ್ಮಲ್ಲಿ ಅರ್ಧಕ್ಕರ್ಧದಷ್ಟು ಮಂದಿ ಒಳ್ಳೆಯ ಹುಡುಗರು" ಎಂದರು! ಹುಡುಗರೆಲ್ಲ ತರಗತಿಗೆ ಹಿಂದಿರುಗಿದ್ದರು ಅನ್ನಿ.

ಇಂಥಹದೆ ಇನ್ನೊಂದು ಪ್ರಸಂಗ, ಕಡೆಯ ಬೆಂಚಿನಲ್ಲಿ ಯಾವಾಗಲೂ ಕುಳಿತು ತುಂಟಾಟವಾಡುತ್ತಿದ್ದ ಕೆಲವು ವಿದ್ಯಾರ್ಥಿಗಳು ಇಂಗ್ಲೀಷ್ ಮಾಸ್ತರರು ತರಗತಿಗೆ

ಬರುವ ಮುನ್ನ ಕಪ್ಪುಹಲಗೆಯ ಮೇಲೆ "ಜಡ್ಡ" ಎಂದು ಬರೆದಿದ್ದರು. ಮಾಸ್ತರರು ತರಗತಿ ಪ್ರವೇಶಿಸುತ್ತಲೇ ಅದನ್ನು ಓರೆಗಣ್ಣಿನಿಂದ ಗಮನಿಸಿದ್ದರು. ಅಂದಿನ ಪಾಠ ಆರಂಭಿಸಿದರು. ಪ್ರಾಸಂಗಿಕವಾಗಿ ಅವರು ಹೇಳಿದರು.

"ಕೆಲವರು ವಿಷಯ ಬರೆದು ಕೊನೆಯಲ್ಲಿ ಸಹಿ ಮಾಡುವುದನ್ನು ಮರೆಯುತ್ತಾರೆ. ಆದರೆ ಈ ಕಪ್ಪುಹಲಗೆಯಲ್ಲಿ ಯಾರೋ ಪುಣ್ಯಾತ್ಮ ಸಹಿ ಮಾಡಿದ್ದಾನೆ, ಆದರೆ ವಿಷಯವೇನು ಎನ್ನುವುದನ್ನೇ ಬರೆದಿಲ್ಲಾ .... .... "

ವಿದ್ಯಾರ್ಥಿಗಳು ಮಾಡಬಹುದಾದ ಸಣ್ಣಪುಟ್ಟ ತಪ್ಪುಗಳನ್ನು ಗುರುಗಳು ಉದಾರ ಹಿನ್ನೆಲೆಯಲ್ಲಿ ನೋಡಿ ಅವರಿಗೆ ತಿಳಿ ಹೇಳಿ ಸನ್ಮಾರ್ಗಕ್ಕೆ ಒಯ್ಯಬೇಕೇ ಪರಂತು ಹಗೆ ಸಾಧಿಸಬಾರದು. ವಿಜ್ಞಾನದ ಮಾಸ್ತರರನ್ನು ಕಿಶೋರನೊಬ್ಬ ಕೇಳಿದನಂತೆ "ಭೂಮಿಯಿಂದ ಸೂರ್ಯನಿಗೆ ಚಾಚಲು ಎಷ್ಟು ಕೋತಿಯ ಬಾಲಗಳು ಬೇಕು ಸಾರ್" ಆದಕ್ಕೆ ಮಾಸ್ತರರ ಉತ್ತರ ಸ್ಪಷ್ಟವಾಗಿಯೇ ಇತ್ತು. "ಅಷ್ಟು ಉದ್ದದ ಒಂದೇ ಬಾಲ ಸಾಕು". ಒಮ್ಮೆ either ಎಂಬ ಇಂಗ್ಲೀಷ್ ಪದದ ಉಚ್ಚಾರಣೆ ಬಗ್ಗೆ ಇಬ್ಬರು ವಿದ್ಯಾರ್ಥಿಗಳ ನಡುವೆ ವಾದವಾಗಿತ್ತು. ಒಬ್ಬ ಈದರ್ ಸರಿ ಅಂದರೆ ಮತ್ತೊಬ್ಬ ಐದರ್ ಎಂದು ಹೇಳಬೇಕು ಎಂದು ಪಟ್ಟು ಹಿಡಿದಿದ್ದ. ಅವರಿಬ್ಬರು ಇಂಗ್ಲೀಷ್ ಪ್ರಾಧ್ಯಾಪಕರ ಬಳಿ ಬಂದಾಗ ಸಮಾಧಾನ ದೊರೆಯಿತು. ಅವರೆಂದರು you can pronounce it in ಐದರ್ way "

ಗುರುಗಳು ತಮ್ಮನ್ನೇ ಹಾಸ್ಯಕ್ಕೆ ಗುರಿಪಡಿಸಿಕೊಂಡ ಘಟನೆಗಳಿಗೂ ಕೊರತೆಯಿಲ್ಲ. ಒಂದು ತರಗತಿಯಲ್ಲಿ ತುಂಟನೊಬ್ಬ ಕಿಟಕಿಯಾಚೆಗಿನ ಮರದ ಮೇಲಿದ್ದ ಕೋತಿಗಳನ್ನು ದಿಟ್ಟಿಸುತ್ತಿದ್ದ. ಮಾಸ್ತರರು ಅವನನ್ನು ನಾನು ಇಲ್ಲೇ ಇರುವಾಗ ನೀನು ಆ ಕೋತಿನ ನೋಡ್ಬೇಕೇನಯ್ಯ "ಎಂದರಂತೆ ! ಅಂತೆಯೆ ಮತ್ತೊಂದು ಪ್ರಸಂಗದಲ್ಲಿ ಶಿಕ್ಷಕರನ್ನು ಯಾರೋ ಹಿಂದಿನ ಸಾಲಿನಿಂದ 'ಕರಡಿ' ಎಂದರಂತೆ. ಆ ಶಿಕ್ಷಕರು ಸಿಟ್ಟಾಗಿ ಎದ್ದುನಿಲ್ಲಿ ಎಂದು ಐದಾರು ಬಾರಿ ಗದರಿದಾಗ ಕೊನೆಗೂ ಒಬ್ಬ ಘಟಿಂಗ ಎದ್ದು ನಿಂತ. ಸರಿ ನಿಜ ಹೇಳಿದ್ದಕ್ಕೆ ನಿನ್ನ ಇವತ್ತು ಸುಮ್ನೆ ಬಿಟ್ಟಿದೀನಿ ಎಂದು ಶಿಕ್ಷಕರು ತೆಪ್ಪಗಾದರಂತೆ. !ನಮಗೆ ಬೋಧಿಸುತ್ತಿದ್ದ ಉಪನ್ಯಾಸಕರೊಬ್ಬರು ತರಗತಿಗೆ ತಡವಾಗಿ ಬರುತ್ತಿದ್ದ ವಿದ್ಯಾರ್ಥಿಗಳನ್ನೆಂದೂ ಬಯ್ಯುತ್ತಿರಲಿಲ್ಲ. ಆದರೆ ಅವರು "ಬನ್ನಿ ದಯವಿಟ್ಟು ಪೀಠ ಅಲಂಕರಿಸಿ" ಎನ್ನುತ್ತ ತಮ್ಮ ಕೈ ಗಡಿಯಾರ ನೋಡಿಕೊಳ್ಳುತ್ತಿದ್ದರಷ್ಟೆ .!

# ಛಲ

–ಟೀಕಲ್ ಗೋಪಾಲಕೃಷ್ಣ, 13 ಎ, ಪಾಕೆಟ್ ಸಿ, ಎರಡನೆ ಹಂತ, ಹೊಸದೆಹಲಿ-110091

---

ಛಲ ಎಂದರೇನು ? ಅಂದುಕೊಂಡ ಕೆಲಸವನ್ನು ಮಾಡೇ ತೀರುವುದು. ಅಂತಹವರನ್ನು ಛಲವಾದಿ ಎನ್ನುತ್ತಾರೆ.

ಈ ಛಲ ಕೇವಲ ಬುದ್ಧಿ ಜೀವಿಯಾದ ಮಾನವನಿಗೆ ಮಾತ್ರ ಮೀಸಲಲ್ಲ. ಈ ಛಲ ಅನೇಕ ವನ್ಯ ಪ್ರಾಣಿಗಳಲ್ಲೂ ಕಂಡು ಬಂದಿದೆ. ಮಾನವ ಬುದ್ಧಿಜೀವಿ. ಅವನಿಗೆ ಅನ್ಯಾಯ ಮಾಡಿದವರ ಮೇಲೆ ಸೇಡು ತೀರಿಸಿಕೊಳ್ಳುವ ಪ್ರವೃತ್ತಿ ಅವನಲ್ಲಿ ಸಹಜ. ಇದು ಮಹಾಭಾರತ ಕಾಲದಿಂದ ಬಂದಿದೆ ದ್ರೌಪದಿಗೆ ಅವಮಾನ ಮಾಡಿದ್ದಕ್ಕೆ ಭೀಮನು ದುಶ್ಯಾಸನ ಹಾಗೂ ದುರ್ಯೋಧನರ ಮೇಲೆ ಅಮಾನುಷವಾಗಿ ಎರಗಿ ಅವರ ರಕ್ತ ಕುಡಿದು, ಅವರ ರಕ್ತವನ್ನು ದ್ರೌಪದಿಯ ಹೆರಳಿಗೆ ಹಚ್ಚಿ ತನ್ನ ಛಲವನ್ನು ತೀರಿಸಿಕೊಂಡ ಎಂದು ಕೇಳುತ್ತಾ ಬಂದಿದ್ದೇವೆ. ಮಹಾಭಾರತ ಕಾಲದಿಂದ ನಾವು ಸಾವಿರಾರು ವರ್ಷಗಳು ಮುಂದೆ ಬಂದು ಜೀವಿಸುತ್ತಿದ್ದೇವೆ. ಆದರೂ ಆಗಾಗ ಈ ಛಲದ ಬಗ್ಗೆ ಕಥೆಗಳನ್ನು ಕೇಳುತ್ತಾ ಬಂದಿದ್ದೇವೆ.

ಇದೀಗ ಬೆಂಗಳೂರಲ್ಲಿ ಕೋಳಿ ಫಯಾಜ್ ಎಂಬ ರೌಡಿ ಎಂ. ಜಿ. ರೋಡಿನಲ್ಲಿ ಒಬ್ಬನನ್ನು ಮಚ್ಚಿನಿಂದ ಕೊಚ್ಚಿ ಕೊಂದು ಹಾಕಿದ್ದನಂತೆ. ಅವನ ಮಗ ಇದೇ ಫಯಾಜನನ್ನು ಅದೇ ರೀತಿ ಕೊಚ್ಚಿ ಕೊಲ್ಲುತ್ತೇನೆ ಎಂದು ಶಪಥ ಮಾಡಿದ್ದನಂತೆ. ಆದೇ ತಿಂಗಳು ಆ ಛಲವಾದಿ ಮಗ ಕೋಳಿ ಫಯಾಜನನ್ನು ಕೋಳಿ ಕತ್ತರಿಸುವಂತೆ ಕತ್ತರಿಸಿ ಬಿಸಾಕಿದನಂತೆ. ಅದು ಅವನ ಜೀವನದ ಮುಖ್ಯ ಧ್ಯೇಯವಾಗಿತ್ತು. ಅದನ್ನು ಹಾಸಲು ಮಾಡಲು ಅವನು ಹೊಂಚು ಹಾಕಿ ಕಾದಿದ್ದ. ಸಮಯ ಸಿಕ್ಕ ತಕ್ಷಣ ಅವನ ಕಾರ್ಯ ಸಾಧಿಸಿಕೊಂಡ. ಇಂತಹವರನ್ನೆ ಛಲವಾದಿಗಳೆನ್ನುವರು.

ಸಾಮಾನ್ಯವಾಗಿ ನಮ್ಮ ಪೂರ್ವಜರು ಬುದ್ಧಿವಂತರೆಂದು ಕಾಣಿಸುತ್ತೆ. ಅದಕ್ಕೆ ಅವರು ಛಲವಾದಿಯಾದ ಹಾವನ್ನು ಪೂಜಿಸುತ್ತಾ, ನಮ್ಮನ್ನು ಹರಸು ನಮಗೆ ತೊಂದರೆ ಕೊಡಬೇಡ ಎಂದು ಆದಿ ಕಾಲದಿಂದ ಪೂಜಿಸಿ ಬರುತ್ತಿರುವುದು. ಹಾವುಗಳೊಂದಿಗೆ ಜೀವಿಸಬೇಕಾದ ನಮ್ಮ ಪೂರ್ವಜರು ಅತಿ ಬುದ್ಧಿವಂತರು. ಅವರಿಗೆ ಹಾವಿನ ಛಲದ ಬಗ್ಗೆ ಹೆಚ್ಚು ಅರಿವಿತ್ತು. ಅದಕ್ಕೆ ಅವರು ಅದರ ತಂಟೆಗೆ ಹೋಗದೆ ಅದನ್ನು ಒಂದು ಪೂಜನೀಯ ಪ್ರಾಣಿಯಾಗಿ ಸನ್ಮಾನಿಸುತ್ತಾ ಬಂದರು.

ಸಮಾಜ ಆಧುನಿಕವಾದಂತೆ ಪ್ರಕೃತಿಯ ಪರಿಸರದಿಂದ ದೂರವಾದ ಪಟ್ಟಣಗಳಲ್ಲಿ ವಾಸಿಸುವ ಈ ಆಧುನಿಕ ಮಾನವ ಜೂ ಗಳಲ್ಲಿ ಬಂಧಿತವಾದ ವನ್ಯ ಪ್ರಾಣಿಗಳನ್ನು ನೋಡಿ ಅವುಗಳು ಬೋನುಗಳಲ್ಲಿರುವುದರಿಂದ ತನಗೇನೂ ಅಪಾಯವಿಲ್ಲವೆಂದು ಸಂತಸ ಪಡುವ ಈ ಪುಕ್ಕಲ ಆಧುನಿಕ ಮಾನವ ಎದೆ ಸೆಟೆಸಿ ಅವುಗಳ ಮುಂದೆ ನಡೆದು ಹೋಗುತ್ತಾನೆ. ಆದರೆ ಇವನು ಅದರೊಂದಿಗೆ ಪ್ರಕೃತಿಯಲ್ಲಿ ಸಹಬಾಳ್ವೆ ಮಾಡಬಲ್ಲನೇ ? ಇಲ್ಲ. ಮಾನವ ಎಲ್ಲಾ ಪ್ರಾಣಿಗಳಿಗಿಂತ ಶಕ್ತಿಹೀನ ಪ್ರಾಣಿ. ಇವನು ಹೆತ್ತ ಮಗು ಹದಿನೈದು ವರ್ಷಗಳಾದರು ತನ್ನ ಕಾಲಮೇಲೆ ನಿಲ್ಲಬಲ್ಲದ ನಿರ್ಬಲ ಪ್ರಾಣಿ. ಅದೇ ಕೋಳಿಮರಿ ಮೊಟ್ಟೆಯಿಂದ ಹೊರಬಂದ ತಕ್ಷಣ ತನ್ನ ಕಾಳನ್ನು ತಾನೇ ಹೆಕ್ಕಿ ತಿನ್ನುತ್ತೆ. ಪಕ್ಷಿಗಳು ತಮ್ಮ ಮರಿಗಳಿಗೆ ರೆಕ್ಕೆ ಬರುವವರೆಗೆ ಆಹಾರ ನೀಡುತ್ತೆ ಅಷ್ಟೆ. ಅದೇ ರೀತಿ ಜಿಂಕೆಯ ಮರಿ ಹುಟ್ಟಿದ ತಕ್ಷಣ ತನ್ನ ಕಾಲೂರಿ ನಡೆಯಲು ಓಡಲು ಪ್ರಾರಂಭಿಸುತ್ತೆ. ಅದೇ ಮಾನವನ ಶಿಶುವಿಗೆ ಏಳಲೇ ಒಂದು ವರ್ಷ ಹಿಡಿಯುವುದು. ಹೆತ್ತ ತಾಯಿಗೆ ಎಂಬತ್ತು ವರ್ಷವಾದರೂ, ತನ್ನ ಅರವತ್ತು ವರ್ಷದ ಮಗನನ್ನು ಮಗೂ ಎಂದು ಕರೆಯುವುದು ಈ ಮಾನವ ಜಾತಿ.

ಪ್ರಕೃತಿಯ ಸೃಷ್ಟಿಯಲ್ಲಿ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳಿವೆ ಎಂದು ಶಾಸ್ತ್ರಗಳು ಸಾರುತ್ತವೆ. ಅದರಲ್ಲಿ ಈ ಜೀವರಾಶಿ ಒಂದು ಮಾನವನದು. ಈ ಮಾನವ ತಾನೂ ಪ್ರಕೃತಿಯ ಉತ್ಪತ್ತಿ ಎಂಬುದನ್ನೇ ಮರೆತು ಆ ಪ್ರಕೃತಿಯನ್ನೇ ಭಸ್ಮಾಸುರನಂತೆ ನಷ್ಟ ಮಾಡಲು ಹೊರಟಿದ್ದಾನೆ ಇದರಿಂದ ಏನಾಗುತ್ತಿದೆ. ಭಸ್ಮಾಸುರನು ಸುಟ್ಟಂತೆ ಮಾನವನು ತನ್ನನ್ನು ತಾನೇ ಸುಟ್ಟು ಕೊಳ್ಳುತ್ತಿದ್ದಾನೆ. ಅವನು ಪ್ರಕೃತಿಯನ್ನು ಸುಟ್ಟು ಆನಂದ ಪಡುತ್ತಿದ್ದಾನೆ. ಅವನೂ ಪ್ರಕೃತಿಯ ಉತ್ಪತ್ತಿ. ಒಂದು ದಿನ ಅವನೂ ಅದರೊಂದಿಗೆ ಸುಟ್ಟು ಹೋಗುವೆನೆಂಬ ಕಲ್ಪನೆ ಅವನಲ್ಲಿಲ್ಲ. ಮಾನವನ ಸಂಕುಚಿತ ಭಾವನೆ ಎಷ್ಟು ಎಂದರೆ ಯಕ್ಷ ಪ್ರಶ್ನೆಯಂತೆ ಮಾನವನು ಎಲ್ಲರೂ ಸಾಯುತ್ತಿದ್ದರೂ ತಾನು ಸಾಯುವುದಿಲ್ಲವೆಂಬ ಒಂದು ಮೂರ್ಖತನ ಅವನನ್ನು ಆವರಿಸಿರುತ್ತೆ. ಇಂತಹ ಮೂರ್ಖ ಮಾನವ ಏನೆಲ್ಲಾ ಮಾಡಬಲ್ಲ. ಇಂತಹ ಬುದ್ಧಿ ಭ್ರಮಣೆಯಿಂದ ತುಂಬಿದ ಮಾನವ ಸಮಾಜದಿಂದ ಪ್ರಕೃತಿಗೆ ಎಂತಹ ಪ್ರಾಮುಖ್ಯತೆ ದೊರೆಯಲು ಸಾಧ್ಯ.

ಅದ್ಯಾಕೋ ಏನೋ ಛಲ ಕೇವಲ ಕೆಟ್ಟ ಕೆಲಸ ಅಥವಾ ಹಗೆ ತೀರಿಸಿಕೊಳ್ಳುವವರಲ್ಲಿ ತುಂಬಿ ತುಳುಕುತ್ತಿರುತ್ತೆ. ಇದೇ ಛಲ ಮಾನವನ ಕಲ್ಯಾಣ ಕಾರ್ಯಗಳಲ್ಲಿ ತೊಡಗಿದರೆ ಆಹಾ ಪೃಥ್ವಿಯ ಮೇಲೆಸ್ವರ್ಗವೇ ಸೃಷ್ಟಿಯಾಗುವುದು. ಆದರೆ ಒಳ್ಳೆಯ ಕಾರ್ಯಗಳನ್ನು ಕೈಗೊಳ್ಳುವ ಛಲಗಾರರು ಬಹಳ ಕಮ್ಮಿ. ಶ್ರೀ ಮಹಾತ್ಮ ಗಾಂಧಿ, ಶ್ರೀ ನೆಹರೂ, ಶ್ರೀ ಸರದಾರ್ ಪಟೇಲ್, ಶ್ರೀ ರಾಜಗೋಪಾಲ ಚಾರಿ, ಶ್ರೀ

ಪ್ರಕಾಶಂ ಮುಂತಾದವರೆಲ್ಲಾ ಛಲಗಾರರೆ. ದೇಶಕ್ಕೆ ಸ್ವಾತಂತ್ರ್ಯ ತಂದು ಕೊಡುವ ವರೆಗೂ ಛಲಹಿಡಿದು ಕೂತ ಮಹನೀಯರು. ಒಳ್ಳೆಯ ಕೆಲಸ ಮಾಡಲು ಅನೇಕ ಮಹನೀಯರು ಛಲ ಹಿಡಿಯುತ್ತಾರೆ. ಇಂತಹವರಲ್ಲಿ ಶ್ರೀ ಸಿದ್ಧಗಂಗಾ ಮಠದ ಸ್ವಾಮಿಗಳಾದ ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು ತಮ್ಮ ಇಡೀ ಜೀವನವನ್ನು ಬಡವರ ಸೇವೆಗಾಗಿ ಮುಡಿಪಿಟ್ಟು 88 ವರ್ಷಗಳಾದರೂ ದೇಹ ಕುಗ್ಗಿದರೂ ಅವರ ಉತ್ಸಾಹ. ಛಲ ಕುಗ್ಗದೆ ಇನ್ನು ಹೆಚ್ಚಾಗಿದೆ. 5000 ಬಡ ವಿದಾರ್ಥಿಗಳಿಗೆ ಅನ್ನ, ವಸತಿ, ಬಟ್ಟೆ ಒದಗಿಸಿ ಅವರನ್ನು ವಿದ್ಯಾವಂತರನ್ನಾಗಿ ಮಾಡಿ ಒಳ್ಳೆಯ ಪ್ರಜೆಗಳನ್ನು ಸಮಾಜಕ್ಕೆ ನೀಡುತ್ತಾ ಬಂದಿದ್ದಾರೆ. ಅವರ ಜೀವನವನ್ನೇ ಬಡವರಿಗಾಗಿ ಮುಡಿಪಿಟ್ಟ ಮಹಾನ್ ಗುರು. ಕೇವಲ ಬೋಧನೆಯಿಂದ ಸಮಾಜ ಸುಧಾರಿಸುವುದಿಲ್ಲ. ಇಲ್ಲದವರನ್ನು ಕೇಳುವವರು ಬಹಳ ಕಮ್ಮಿ.

ಇದ್ದವರನ್ನು ಎಲ್ಲರೂ ವಿಚಾರಿಸುವರು ಇದು ಜೀವನದ ಧರ್ಮ. ಆದರೆ ಸಿದ್ಧಗಂಗಾ ಮಠಾಧೀಶರು ಇಲ್ಲದವರನ್ನು ಹುಡುಕಿ ಆರಿಸಿ ಅವರಿಗೆ ಜೀವನ ಮಾರ್ಗ ತೋರುತ್ತಿದ್ದಾರೆ. ಎಂದರೆ ಅದು ನಿಜವಾದ ಸಮಾಜ ಸೇವೆ. ಅವರು ಜನರ ಸೇವೆಯೇ ಜನಾರ್ಧನನ ಸೇವೆ ಎಂದು ನಂಬಿ ಬೆಳಗ್ಗಿನಿಂದ ರಾತ್ರಿಯವರೆಗೆ ಅವರ ಚಿಂತನೆಯಲ್ಲೇ ಇರುವ ಮಹಾನ್ ವ್ಯಕ್ತಿ. ಅವರು ವಿದ್ಯಾವಂತರಾಗಿ ತಮ್ಮ ಮುಂದಿನ ಪೀಳಿಗೆ ಇದರಿಂದ ವಂಚಿತರಾಗಬಾರದೆಂಬ ಮಹಾನ್ ಉದ್ದೇಶದಿಂದ ತಮ್ಮ ಜೀವನವನ್ನೆ ಪಾವನ ಮಾಡಿಕೊಂಡರು. ಇವರ ಜೋಳಿಗೆ ಎಷ್ಟು ಮಹತ್ವದ್ದೆಂದರೆ, ಇದರಿಂದ ಸಾವಿರಾರು ವಿದ್ಯಾರ್ಥಿಗಳ ಊಟ, ವಸತಿ, ವಿದ್ಯೆ ಹಾಗೂ ಈ ಕ್ಷೇತ್ರಕ್ಕೆ ಬರುವ ಭಕ್ತಾದಿಗಳಿಗೆ ಊಟ ಉಪಚಾರ ಎಲ್ಲ ಒದಗಿಸುತ್ತೆ. ಇಂತಹ ಮಠಾಧೀಶರು ಒಂದೊಂದು ಹಳ್ಳಿಯಲ್ಲಿಯೂ ಇದ್ದಿದ್ದರೆ ನಮ್ಮ ದೇಶಕ್ಕೆ ಯಾವ ಸಮಸ್ಯೆಯೂ ಇರುತ್ತಿರಲಿಲ್ಲ. ಇವರ ಮಠದಿಂದ ಹೊರಬಿದ್ದ ವಿದ್ಯಾರ್ಥಿಗಳು ಉತ್ತಮ ನೈತಿಕ ಬಲವುಳ್ಳ ವ್ಯಕ್ತಿಗಳಾಗಿರುತ್ತಾರೆ. ಅವರಿಗೆ ಗುರುಗಳ ಅನುಗ್ರಹ ಇರುತ್ತೆ.

ಪುರಂದರದಾಸರಿಗೆ ಶ್ರೀ ಕೃಷ್ಣನ ದರ್ಶದಪಡೆಯುವ ಛಲವಿತ್ತು. ಅದಕ್ಕಾಗಿ ಅವರು ಅನುಭವಿಸಿದ ಕಷ್ಟಗಳೆಷ್ಟೋ. ಆದರೂ ಕೊನೆಗೂ ಅವನ ದರ್ಶನ ಪಡೆದ ಪುಣ್ಯಾತ್ಮರು.

ದುರ್ಯೋಧನನ ಛಲ ಕುರುವಂಶದ ನಾಶಕ್ಕೇ ಮೂಲವಾಯಿತು. ಅದೇ ಸತ್ಯವೇ ಜಯ ಎಂದು ನಂಬಿದ್ದ ಧರ್ಮರಾಯನ ಛಲ ಅವನಿಗೆ ಸಶರೀರ ಸ್ವರ್ಗಕ್ಕೆ ಹೋಗುವ ಸೌಲಭ್ಯ ದೊರಕಿಸಿ ಕೊಟ್ಟಿತ್ತು.

ಛಲ ಒಳ್ಳೆಯದೂ ಹೌದು. ಕೆಟ್ಟದ್ದೂ ಹೌದು. ಆದರೆ ಅದು ಅದನ್ನು ಹಿಡಿಯುವವನ ಮೇಲೆ ನಿರ್ಧರವಾಗಿರುತ್ತೆ.

ಆನೆ ಹಾಗೂ ದರ್ಜಿಯ ಕತೆ ನಾವು ಕೇಳಿದ್ದೇವೆ. ದರ್ಜಿ ಸೂಜಿ
ಂದ ಅವರ ಸೊಂಡಿಲನ್ನು ಚುಚ್ಚಿದ್ದಕ್ಕೆ ಆ ಆನೆ ಬಗ್ಗಡದ ನೀರನ್ನು ತುಂಬಿ
ಂಡು ಬಂದು ಅವನ ಅಂಗಡಿಯಲ್ಲಿ ಎರಚಿತಂತೆ. ಇದು ಆನೆಯಿಟ್ಟ ಛಲ.

ಇದೀಗ ದೆಹಲಿಯ ಮೆಹರೌಲಿ ಫಾರ್ಮ್‌ಹೌಸ್‌ನಲ್ಲಿ ಒಬ್ಬ ಮಾಲಿ ಸಂಜೆ
ಂದು ನಾಗರಹಾವನ್ನು ಕೊಂದು ರಾತ್ರಿ ತನ್ನ ಸಂಗಡಿನೊಂದಿಗೆ ನಿದ್ದೆ ಹೋಗು-
ದ್ದ. ಆರಡಿ ಉದ್ದದ ನಾಗರ ಹಾವೊಂದು ಬಂದು ಅವನನ್ನು ರಾತ್ರಿ ಕಚ್ಚಿ ಅವನು
ತ್ತ ಮೇಲೂ ಅವನನ್ನು ಬಿಡದೆ ಅವನ ಎದೆಯ ಮೇಲೆ ಕೂತಿತ್ತು. ಬೆಳಗ್ಗೆ ಅವನ
ಕ್ಕದಲ್ಲಿ ಮಲಗಿದ್ದ ಮತ್ತೊಬ್ಬ, ಹಾವನ್ನು ನೋಡಿ ಹೆದರಿ ಓಡಿಹೋಗಿ ಪೊಲೀಸ
ನ್ನು ಕರೆದುಕೊಂಡು ಬಂದ. ಆದರೂ ಹಾವು ಬುಸುಗುಟ್ಟುತ್ತಾ ಅವನ ಎದೆಯ
ೕಲೆ ಕೂತಿತ್ತು. ನಂತರ ಪೊಲೀಸರು ಲಾಠಿಗಳಿಂದ ಹೊಡೆದು ಆ ನಾಗರಹಾವನ್ನು
ೂಂದು, ಆ ಮಾಲಿಯ ದೇಹವನ್ನು ಆಸ್ಪತ್ರೆಗೆ ಒಯ್ದರು. ಇದು ನಿಜವಾಗಿ ನಡೆದ
ಂಗತಿ. ಆದ್ದರಿಂದಲೇ ಏನೋ ಕಥೆಗಳಲ್ಲೂ ಹಾವಿನ ಛಲದ ಬಗ್ಗೆ ವಿವರಗಳಿವೆ.

---

## ವಚನ

ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗವೆಂದರಿದು ಮರೆದು ಬರು
ೊರೆವೋದವರು ಜಂಗಮವನಿನ್ನು ಬೆರಸಲೇತಕ್ಕಯ್ಯ ? ಆ ಲಿಂಗದೊಳಗೆ ಜಂಗಮ
ನೆರಿಸಿಕೊಂಬುದು. ಲಿಂಗಾರ್ಚನೆಯವಸರಕ್ಕೆ ಜಂಗಮ ಮನೆಗೆ ಬಂದರೆ, ಲಿಂಗಾ
ರ್ಚನೆಯ ಮಾಡು, ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೇ ಭಕ್ತ.
ಜಂಗಮ ಹೊರಗಿರಲು ಲಿಂಗಾರ್ಚನೆಯ ಮಾಡುತ್ತಿರ್ಪಾತನೇತರ ಭಕ್ತ ?
ಂಗಮದ ಮುಂದೆ ಲಿಂಗವ ಕೈಯಲ್ಲಿ ಹಿಡಿದುಕೊಂಡು ಸಹ ಪಂಕ್ತಿಯಲ್ಲಿ ಕುಳ್ಳಿರ್ದು
ೂಜಿಸುವಾತ ಭೃತ್ಯಾಚಾರದ್ರೋಹನು. ಆ ಭಕ್ತನ ಮನೆಯ ಹೋಗುವ ಜಂಗಮವೆ
ಜ್ಞಾನಿ. ನಮ್ಮ ಗುಹೇಶ್ವರನ ಶರಣರ ಕೂಡೆ ಅಹಂಕಾರವ ಹೊತ್ತಿರ್ಪವರ
ಂಡಡೆ ನಾನೊಲ್ಲೆ ಕಾಣಾ ಸಂಗನ ಬಸವಣ್ಣಾ.

—ಸಂಗನ ಬಸವಣ್ಣ

# ಬಾಕಿ ಕೆಲಸ

–ಬಳ್ಕೂರು ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸೊಂಡೂರು, ಬಳ್ಳಾರಿ ಜಿಲ್ಲೆ.

ಯಾವ ಕೆಲಸವೇ ಆದರೂ ನಿಶ್ಚಿತವೇಳೆಯಲ್ಲಿ ಮುಗಿಯದಿದ್ದರೆ ಅದನ್ನು ಬಾಕಿ ಕೆಲಸ ಅಥವಾ ಪೆಂಡಿಂಗ್ ವರ್ಕ್ ಎನ್ನುತ್ತೇವೆ. ಅದನ್ನು ಮುಂದೆ ಎಂದಾದರು ಮಾಡಲು ಇಟ್ಟು ಬಿಡಲಾಗುತ್ತದೆ. ಆಫೀಸಿನ ಕೆಲಸಗಳಿಗಷ್ಟೇ ಈ ಮಾತು ಅನ್ವಯಿ ಸುವುದಿಲ್ಲ ಎಷ್ಟೇ ಮನೆಗೆಲಸಗಳನ್ನು ನಾವು ಈ ರೀತಿ ಮುಂದೆ ಹಾಕುತ್ತೇವೆ. ವೇಳೆಯ ಅಭಾವ ಹಾಗೂ ಅಲಕ್ಷ್ಯದಿಂದ ಈ ರೀತಿ ಆಗುವುದುಂಟು.

ನನ್ನ ಗೆಳೆಯನೊಬ್ಬ ತುಂಬಾ ಮೋಜಿನ ಮನುಷ್ಯ. ಅವನೆಂದೂ ಯಾವುದರ ಬಗೆಗೂ ತಲೆಗೆಡಿಸಿ ಕೊಂಡವನಲ್ಲ. ಆತ ಸಾಕಷ್ಟು ಚತುರ ಹಾಗೂ ಪರಿಶ್ರಮಿಯಿದ್ದ. ಆದರೆ ಯಾವ ಕೆಲಸವನ್ನು ಮನಸ್ಸಿಟ್ಟು ಮಾಡುವ ಅಭ್ಯಾಸವಿರಲಿಲ್ಲ. ಪರಿಣಾಮ ವಾಗಿ ಅವನ ಪ್ರತಿ ಕೆಲಸವೂ ಬಾಕಿ ಉಳಿಯುತ್ತಿತ್ತು. ಅವನ ಮೋಜು ಫೈಲುಗಳಿಂದ ತುಂಬಿ ಹೋಗಿತ್ತು. ೨-೩ ಸ್ಮರಣ ಪತ್ರ (ರಿಮೈಂಡರ್) ಗಳನ್ನು ಆತ ಲೆಕ್ಕಿಸುತ್ತಲೇ ಇರಲಿಲ್ಲ. ಆದರೆ ಮೇಲಿನವರ ಒತ್ತಡ ಹೆಚ್ಚಿದಾಗ ಸಂಗಾತಿಗಳನ್ನು ವಿನಂತಿಸಿಕೊಂಡು ರಾತ್ರಿಯಿಡೀ ಎಚ್ಚತ್ತಿದ್ದು ಕೆಲಸ ಮುಗಿಸಿಕೊಡುತ್ತಿದ್ದ.

ಎಂದಾದರು ನಮ್ಮ ಈ ಬಗ್ಗೆ ಪ್ರಸ್ತಾಪಿಸಿದರೆ ಇಂದಿನದನ್ನು ನಾಳೆ ಮಾಡು .... ನಾಳೆಯದನ್ನು ನಾಡಿದು ಮಾಡು .... ಇಷ್ಟೇಕೆ ಆತುರ ಇನ್ನು ಸಾಕಷ್ಟು ಕಾಲ ಬದುಕಬೇಕು— ಎಂದು ನಗುತ್ತ ನುಡಿಯುವ.

ಒಮ್ಮೆ ಅವನ ಮಗ ಕಾಹಿಲೆ ಬಿದ್ದ. ಹೀಗಾಗಿ ಆತ ರಜೆ ಪಡೆದು ಹೋಗಬೇಕಾ ಯಿತು. ಅದೇ ವೇಳೆ ದುರ್ದೈವದಿಂದ ಹೆಡ್ ಆಫೀಸಿದಿಂದ ಇನ್ಸ್‌ಪೆಕ್ಟರರ ತಂಡ ಬಂತು ನಮ್ಮ ಈ ಮಿತ್ರನ ಕೆಲಸ ಎಲ್ಲವೂ ಅಪೂರ್ಣವಾಯಿತ್ತು. ಹಲವಾರು ಪತ್ರಗಳಿಗೆ ಉತ್ತರವನ್ನೇ ಬರೆದಿರಲಿಲ್ಲ. ಫೈಲ್‌ಗಳು ಅಪೂರ್ಣವಾಗಿದ್ದವು.

ಈಗ ಗೆಳೆಯನ ಸ್ಥಿತಿ ಶೋಚನೀಯವಾಯಿತು. ಒಂದೆಡೆ ಕಾಯಿಲೆ ಬಿದ್ದ ಮಗನ ಚಿಂತೆ .... ಇನ್ನೊಂದೆಡೆ ಅಧಿಕಾರಿಗಳೆದುರು ಎಲ್ಲಾ ಫೈಲುಗಳನ್ನು ಪೂರ್ಣಗೊಳಿಸಿ ಇಡಬೇಕಾಗಿದೆ.

ಸಮಯ ಸಿಗುತ್ತಿದ್ದರೆ ಮಿತ್ರರ ನೆರವಿನಿಂದ ಇರುಳಿಡೀ ಎಚ್ಚತ್ತಿದ್ದು ಎಲ್ಲವನ್ನು ಮುಗಿಸುತಿದ್ದ. ಆದರೆ ಮನೆಗೂ ಆಸ್ಪತ್ರೆಗೂ ತಿರುತಿರುಗಿ ಆತ ಸುಸ್ತಾಗಿದ್ದ.

ಪರಿಣಾಮದ ಬಗ್ಗೆ ಯೋಚಿಸಿ ಯೋಚಿಸಿ ಆತ ಗಾಬರಿಯಾದ. ಕೆಟ್ಟ ರಿಮಾರ್ಕ್ ಬಿದ್ದು, ಭಡ್ತಿಗೂ ಎರವಾಗುವ ಭಯವಿತ್ತು. ಇನ್ನೊಂದೆಡೆ ಹುಡುಗನ ಆರೈಕೆ ಸರಿಯಾಗದೆ ಆತನ ಸ್ಥಿತಿಕೂಡ ಹದಗೆಡುವ ಹೆದರಿಕೆಯಿತ್ತು.

ಮಾನವೀಯ ಆಧಾರದ ಮೇಲೆ ನಾವೆಲ್ಲ ಸೇರಿ ಅಧಿಕಾರಿಗಳಿಗೆ ಆತನ ದುಃಸ್ಥಿತಿಯನ್ನು ನಿವೇದಿಸಿದೆವು. ಅವನನ್ನು ಅವರು ತಮ್ಮ ಕೋಣೆಗೆ ಕರೆದು ಸಾಕಷ್ಟು ಗದರಿಸಿದರು. ಮುಂದೆಂದೂ ಕೆಲಸವನ್ನು ಬಾಕಿಯಿರಿಸುವುದಿಲ್ಲವೆಂದು ಅವನಿಂದ ಮಾತು ಪಡೆದು ಬಾಯ್ದೆರೆ ಮಾತ್ರ ಎಚ್ಚರಿಕೆ ನುಡಿ ಬಿಟ್ಟು ಬಿಟ್ಟರು. ಹುಡುಗನ ಕಾಯಿಲೆಯಿಂದಾಗಿಯೇ ಒಂದು ಗಂಡಾಂತರ ನ್ಯಾಯವಾಯಿತು.

ಈ ಘಟನೆ ಅತನ ಮೇಲೆ ಗಂಭೀರ ಪರಿಣಾಮ ಬೀರಿತು. ಅವನು ಆಯಾದಿನದ ಕೆಲಸವನ್ನು ಅಂದೇ ಮುಗಿಸಲು ನಿರ್ಧರಿಸಿದ. ಮಿತ್ರ ಹೇಗಿದ್ದರೂ ಚತುರ ಹಾಗೂ ಪರಿಶ್ರಮಿಯಿದ್ದ. ಸೋಮಾರಿತನದ ಅಭ್ಯಾಸ ತಪ್ಪುತ್ತಲೇ ಎಲ್ಲೆಲ್ಲೂ ಅವನು ಕೆಲಸದ ಪ್ರಶಂಸೆ ಹಬ್ಬತೊಡಗಿತು. ೫ ವರ್ಷಗಳೊಳಗೆ ಅವನಿಗೆ ಎರಡು ಭಡ್ತಿ ದೊರೆಯಿತು. ಇಂದು ಆತ ಒಂದು ಸ್ವತಂತ್ರ ಆಫೀಸಿನ ಮುಖ್ಯಾಧಿಕಾರಿ. ಅವನ ಆಫೀಸು ಇಂದು ಅನುಕರಣೀಯವಾಗಿದೆ.

ಕೆಲಸದ ಬಾಕಿ ಬಾಹು ಪರಿಸ್ಥಿತಿಗಳನ್ನವಲಂಬಿಸಿಲ್ಲ. ಅದು ನಮ್ಮ ಮನಸ್ಸಿನ ದೌರ್ಬಲ್ಯವಾಗಿದೆ. ಮಾನವನ ಮನ ಸರಳತೆಯತ್ತ ಸುತ್ತಾಡುತ್ತದೆ. ಎಂತಲೇ ನಮಗೆ ಯಾವುದಾದರೂ ಕೆಲಸದಲ್ಲಿ ತೊಂದರೆ ಅಥವಾ ಕಷ್ಟ ತೋರಿತೆಂದರೆ ಅದರಿಂದ ಪಾರಾಗುವ ದಾರಿ ಹುಡುಕುತ್ತೇವೆ. ಕಷ್ಟದ ಕೆಲಸ ಬಿಟ್ಟು ಸುಲಭ ವಾದುದನ್ನಷ್ಟೇ ಮಾಡ ಬಯಸುತ್ತೇವೆ.

ಆದರೆ ನುಣುಚಿಕೊಳ್ಳುವುದು ಇದಕ್ಕೆ ಪರಿಹಾರವಲ್ಲ. ಏಕೆಂದರೆ ಅದು ಭಾರೆಯಾಗಿ ನಮ್ಮ ತಲೆಯ ಮೇಲೆ ಬೀಳುತ್ತದೆ. ಕಾಲ ಕಳೆದಂತೆ ಈ ಭಾರ ಹೆಚ್ಚುತ್ತ ಹೋಗುತ್ತದೆ ನಾವು ಈ ಬಾಕಿ ಕೆಲಸದಲ್ಲಿ ಅದೆಷ್ಟು ಮುಳುಗಿ ಹೋಗುವೆವೆಂದರೆ ಯಾವುದೇ ಹೊಸ ಕೆಲಸ ಆರಂಭಿಸುವಂತೆಯೇ ಇಲ್ಲ.

ಆದ್ದರಿಂದ ಪ್ರತಿಯೊಂದನ್ನು ನಿಶ್ಚಿತವೇಳೆಯಲ್ಲೇ ಮುಗಿಸಿ ಬಿಡಬೇಕು. ಏಕೆಂದರೆ ನಮ್ಮ ಕೆಲಸವನ್ನು ಬೇರಾರೂ ಮಾಡುವುದಿಲ್ಲ. ಅದನ್ನು ಇಂದಲ್ಲ ನಾಳೆ ನಾವೇ ಮುಗಿಸಬೇಕು. ಕೆಲಸದ ಕಷ್ಟವನ್ನು ನಾವೇ ಸಹಿಸಬೇಕು. ಹೀಗಾಗಿ ಕಷ್ಟದ ನೆಪವೊಡ್ಡಿ ಯಾವುದನ್ನೂ ಮುಂದಕ್ಕೆ ಹಾಕಬಾರದು.

ಕೆಲವೊಮ್ಮೆ ಕಾಯಿಲೆ ಹಾಗೂ ಇನ್ನಿತರ ಕಾರಣಗಳಿಂದಾಗಿ ನಮ್ಮ ಕೆಲಸ ಬಾಕಿ ಆಗುವುದುಂಟು. ಬಯಸಿದರೂ ನಾವದನ್ನು ಪೂರ್ಣಗೊಳಿಸಲಾರೆವು.

ಇಂಥ ವೇಳೆ ನಮಗೆ ಸಿಗುವ ಅತ್ಯಲ್ಪ ಸಮಯವನ್ನೇ ಈ ಕಾರ್ಯಕ್ಕಾಗಿ ವಿನಿಯೋಗಿಸಬಹುದು. ರಾತ್ರಿ ವೇಳೆ ಕೂಡ ಕೆಲಸ ಮಾಡಬೇಕಾಗಿ ಬಂದರೂ ಹಿಂಜರಿಯಬಾರದು. ಏಕೆಂದರೆ ಕೆಲಸ ಮುಗಿದ ಬಳಿಕ ತಮಗೆ ವಿಚಿತ್ರ ಆನಂದ ದೊರೆಯುವುದು. ಇದರಿಂದ ಮಾನಸಿಕ ತೃಪ್ತಿಯೂ ಉಂಟಾಗುವುದು. ನಾವು ಮುಂದಿನ ಹೊಸ ಕೆಲಸಗಳಿಗಾಗಿಯೂ ಸಿದ್ಧರಿರುತ್ತೇವೆ.

ಮನೆಯಲ್ಲಿ ಊಟ ತಿಂಡಿ, ಬಟ್ಟೆಬರೆ, ಮಕ್ಕಳ ಶಿಕ್ಷಣ, ನಿವಾಸ, ಆತಿಥ್ಯ ಹಾಗೂ ಇನ್ನಿತರ ಹಲವಾರು ಕೆಲಸಗಳಿರುತ್ತವೆ. ನಾವು ಈ ಬಗ್ಗೆ ಪೂರ್ವಯೋಜನೆ ತಯಾರಿಸದೆ ಹೋದರೆ ನಮ್ಮೆಲ್ಲ ಕೆಲಸಗಳೂ ಅಸ್ತವ್ಯಸ್ತವಾಗುವುವು.

ಇದಕ್ಕಾಗಿ ದಿನಾಲೂ ಬೆಳಿಗ್ಗೆ ಏಳುತ್ತಲೇ ಆ ದಿನ ಏನೇನು ಮಾಡಬೇಕೆಂಬುದರ ಬಗ್ಗೆ ೪-೫ ನಿಮಿಷ ಯೋಚಿಸಬೇಕು. ಪೇಟೆಯಿಂದ ಏನು ತರಬೇಕು ? ಯಾರಲ್ಲಿಗೆ ಹೋಗಬೇಕು ? ಎಂದು ಮೊದಲಾದವನ್ನು ನಿರ್ಧರಿಸಬೇಕು. ರಾತ್ರಿ ನಿದ್ರಿಸುವುದಕ್ಕೆ ಮೊದಲು ಅಂದು ಇಡೀ ದಿನ ಮಾಡಿದ ಕೆಲಸಗಳನ್ನು ವಿಮರ್ಶಿಸಿ ಯಾವಾವ ಕೆಲಸ ಉಳಿದು ಕೊಂಡಿತು, ಎಲ್ಲೆಲ್ಲಿ ತಪ್ಪಾಗಿದೆ ಎಂದು ನೋಡಬೇಕು. ಅಪೂರ್ಣ ಕಾರ್ಯವನ್ನು ಎಂದು ಪೂರ್ಣಗೊಳಿಸಬೇಕೆಂದೂ ತೀರ್ಮಾನಿಸಬೇಕು.

ಬೆಳಿಗ್ಗೆ ಹಾಗೂ ರಾತ್ರಿಯ ಈ ಸಣ್ಣ ವಿಚಾರವೇ ನಿಮ್ಮ ಗೃಹಜೀವನದ ಮೇಲೆ ಚಮತ್ಕಾರಿಕ ಪ್ರಭಾವ ಬೀರಬಲ್ಲುದು. ನಿಮ್ಮ ಬದುಕೂ ಸುಗಮವಾಗಿ ಸಾಗಬಲ್ಲುದು ಮತ್ತು ನಿಮ್ಮ ಪರಿವಾರದ ಜನರಿಗೂ ನಿಮ್ಮ ಬಗ್ಗೆ ಯಾವುದೇ ದೂರಿಗೆ ಅವಕಾಶ ಸಿಗಲಾರದು.

ಮನುಷ್ಯನಿಗೆ ಕೆಲವು ಸ್ವಂತ ಕೆಲಸಗಳಿರುತ್ತವೆ. ಅವು ಬಾಕಿ ಉಳಿದವೆಂದರೆ ತುಂಬಾ ಹಾನಿಯುಂಟಾಗಬಲ್ಲುದು. ಉದಾಹರಣೆಗಾಗಿ ನಾವು ನಿಶ್ಚಿತದಿನ ಮುಖ ಕ್ಷೌರ ಮಾಡಿಕೊಳ್ಳದಿದ್ದರೆ, ಕೆಲವೊಮ್ಮೆ ೩-೪ ದಿನ ಅದನ್ನು ಮಾಡಲು ಸಂದರ್ಭವೇ ಸಿಗದೆ ಹೋದೀತು. ಆಗ ನಮ್ಮ ಬೆಳೆದ ಗಡ್ಡ ನೋಡಿ, ಜನ ನಮ್ಮ ಅಸಡ್ಡೆ ಹಾಗೂ ಸೋಮಾರಿತನವನ್ನು ಗುರುತಿಸುವರು. ನಮ್ಮ ದೈನಂದಿನದ ಕೆಲಸಗಳಲ್ಲೂ ನಿಯಮಿತತೆ ಇರಲಿ. ಈಗ ನಮಗೆ ಇತರ ಕಾರ್ಯಗಳನ್ನು ಮಾಡಲೂ ಅವಕಾಶ ಸಿಗುವುದು.

ತಮ್ಮ ಕೆಲಸಗಳನ್ನು ನಿಶ್ಚಿತವೇಳೆಯಲ್ಲಿ ಪೂರೈಸುವವರು ಸುಖ ಹಾಗೂ ಶಾಂತ ಜೀವನ ನಡೆಸಬಲ್ಲರು. ಕೆಲಸ ಬಾಕಿ ಉಳಿಸುವವರು ಯಾವಾಗಲೂ ಚಿಂತಿತರಿರುತ್ತಾರೆ.

ಆದ್ದರಿಂದ ಕೆಲಸ ಸ್ವಂತದ್ದಿರಲಿ; ಸಾರ್ವಜನಿಕವಾಗಿರಲಿ, ದೊಡ್ಡದಿರಲಿ, ಸಣ್ಣದಿರಲಿ—ಅದನ್ನು ನಿಶ್ಚಿತ ವೇಳೆಯಲ್ಲೇ ಮುಗಿಸಬೇಕು.

# : ಕ್ಷೇತ್ರವಾರ್ತೆ :

—ಹೆಚ್. ಬಿ. ಗಂಗಾಧರಯ್ಯ

## : ಸ್ನಾತಕೋತ್ತರ ಕೇಂದ್ರ ಉದ್ಘಾಟನೆ :

ಬೆಂಗಳೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರದ ತರಗತಿಗಳ ಪ್ರಾರಂಭೋತ್ಸವವನ್ನು ತುಮಕೂರು ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಆವರಣದಲ್ಲಿ 18 ಸೆಪ್ಟಂಬರ್ 1995 ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಉದ್ಘಾಟಿಸಿದರು. ಶ್ರೀ ಶ್ರೀಗಳು ಮಾತನಾಡಿ ಮಂಗಳ ಮುಹೂರ್ತದಲ್ಲಿ ಇಂದು ಶುಭಕಾರ್ಯ ಆರಂಭವಾಗಿದೆ. ವಿದ್ಯಾ ಮತ್ತು ಕ್ರೀಡಾ ಕೇಂದ್ರವಾಗಿದ್ದ ತುಮಕೂರು ಜಿಲ್ಲೆ ಮತ್ತೆ ತನ್ನಗತವೈಭವದ ದಿನಗಳಿಗೆ ಮರಳು ವಂತಾಗಲಿ ಎಂದು ಆಶಿಸಿದರು. ಯಾವುದೇ ಶಿಕ್ಷಣ ಕೇಂದ್ರದ ಯಶಸ್ಸು ವಿದ್ಯಾರ್ಥಿ ಮತ್ತು ಶಿಕ್ಷಕರ ಸಾಧನೆಯ ಮೇಲೆ ನಿಂತಿದೆಯೇ ಹೊರತು ಕಟ್ಟಡ, ಕಛೇರಿ, ಸಲ-ಕರಣೆಗಳ ಮೇಲಲ್ಲ ಎಂದು ಅಭಿಪ್ರಾಯಪಟ್ಟರು.

ಗ್ರಾಮಾಂತರ ವಿದ್ಯಾರ್ಥಿಗಳಿಗೆ ತುಮಕೂರು ನಗರ ಮತ್ತು ಜಿಲ್ಲೆಯಲ್ಲಿ ಒಳ್ಳೆಯ ಸೌಲಭ್ಯಗಳಿವೆ. ವಿದ್ಯಾರ್ಥಿಗಳು ಪದವಿಗಳಿಸುವುದು ಮುಖ್ಯವಲ್ಲ. ಜ್ಞಾನದಾಹ ಮತ್ತು ಜ್ಞಾನ ಸಂಪಾದನೆಗೆ ಹೆಚ್ಚುಗಮನ ನೀಡಬೇಕು. ಪ್ರಸ್ತುತದಲ್ಲಿ ಮಾನವೀಯ ಬೆಳವಣಿಗೆಯುಳ್ಳ ವಿದ್ಯಾರ್ಥಿಗಳು ಹೊರಬರುವಂತೆ ಪ್ರಾಧ್ಯಾಪಕರು ಶ್ರಮಿಸಬೇಕು ಈ ಸ್ನಾತಕೋತ್ತರ ಕೇಂದ್ರ ಆದರ್ಶ ಸಂಸ್ಥೆಯಾಗಿ ಬೆಳೆಯಲಿ ಎಂದು ಹಾರೈಸಿದರು.

ಬೆಂ. ವಿ. ಉಪಕುಲಪತಿ ಶ್ರೀ ಎನ್. ಆರ್. ಶೆಟ್ಟಿಯವರು ಪ್ರಸ್ತಾವಿಕವಾಗಿ ಮಾತನಾಡುತ್ತಾ ಸಮಿತಿ ನೇಮಿಸಿದ ವರದಿ ಪ್ರಕಾರ ತುಮಕೂರು ಮತ್ತು ಕೋಲಾರಗಳಲ್ಲಿ ಸ್ನಾತಕೋತ್ತರ ಕೇಂದ್ರವನ್ನು ತೆರೆಯಲು ವಿಶ್ವವಿದ್ಯಾಲಯ ನಿರ್ಧರಿಸಿದೆ. ಸ್ವಂತ ಕಟ್ಟಡ ಮತ್ತು ಇತರೆ ಸೌಲಭ್ಯಗಳಿಗಾಗಿ 2 ಕೋಟಿರೂಗಳ ಅಂದಾಜು ಮಾಡಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯವನ್ನು ಬೆಂಗಳೂರು ಜಿಲ್ಲೆಗೇ ಸೀಮಿತಗೊಳಿಸಿ ಉಳಿದ ಜಿಲ್ಲೆಗಳ ಕಾಲೇಜುಗಳಿಗೆ ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪಿಸುವ ಅವಶ್ಯಕತೆ ಇದೆ ಎಂದು ಶಿಫಾರಸ್ಸು ಮಾಡಿದೆ. ಆದ್ದರಿಂದ ತುಮಕೂರು ಭವಿಷ್ಯದಲ್ಲಿ ಪೂರ್ಣ ಪ್ರಮಾಣದ ವಿಶ್ವವಿದ್ಯಾಲಯ ಕೇಂದ್ರದ ಸಾಧ್ಯತೆ ಇದೆ ಎಂದು ಹೇಳಿದರು.

ಸದ್ಯದಲ್ಲಿ ಈ ಕೇಂದ್ರದಲ್ಲಿ ಕನ್ನಡ, ಇತಿಹಾಸ, ಗಣಿತ ಮತ್ತು ವಾಣಿಜ್ಯ ವಿಭಾಗದ ಸ್ನಾತಕೋತ್ತರ ತರಗತಿಗಳು ನಡೆಯಲಿದ್ದು 130 ವಿದ್ಯಾರ್ಥಿಗಳಿಗೆ

ಪ್ರವೇಶ ನೀಡಿದೆ. ಈ ಕೇಂದ್ರ ಹೆಚ್ಚಿನ ಗುಣಮಟ್ಟ ಸಾಧಿಸಬೇಕು. ಇಲ್ಲಿಯ ಎಸ್. ಐ.ಟಿ. ಆವರಣದಲ್ಲಿ ಸ್ನಾತಕೋತ್ತರ ಕೇಂದ್ರ ಸ್ಥಾಪಿಸಲು ಶ್ರೀ ಶ್ರೀಗಳು ಅನುಮತಿ ನೀಡಿ ಯಶಸ್ಸು ಕೋರಿದ್ದಕ್ಕಾಗಿ ಜೆಂ. ವಿ. ವಿ. ಪರವಾಗಿ ಕೃತಜ್ಞತೆಗಳನ್ನು ಸಮರ್ಪಿಸಿದರು.

ತುಮಕೂರು ಶಾಸಕ ಶ್ರೀ ಎಸ್. ಶಿವಣ್ಣನವರು ಮಾತನಾಡಿ ತುಮಕೂರು ಜಿಲ್ಲೆ ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪನೆಗೆ ಜಿಲ್ಲೆಯ ಜನರ ಸಹಕಾರದೊಂದಿಗೆ ಪ್ರಯತ್ನ ನಡೆಸುವುದಾಗಿ ಹೇಳಿದರು. ಈ ಸಂದರ್ಭದಲ್ಲಿ ಕ. ವಿ. ಮುಖ್ಯಸ್ಥರಾದ ಡಾ|| ಹೆಚ್. ಎಂ. ಮರುಳುಸಿದ್ದಪ್ಪ, ಕೇಂದ್ರದ ಕ.ವಿ. ಮುಖ್ಯಸ್ಥರಾದ ಬರಗೂರು ರಾಮಚಂದ್ರಪ್ಪ, ಡಾ. ಹಂ. ಪ. ನಾಗರಾಜಯ್ಯ, ಮಾಜಿ ಶಾಸಕ ಸಿ. ಎನ್. ಭಾಸ್ಕರಪ್ಪ, ಡಿ. ಚಂದ್ರಪ್ಪ, ಹೆಚ್. ಆರ್. ಶೇಷಾದ್ರಿ ಶುಭಕೋರಿ ಮಾತನಾಡಿದರು. ಎಸ್. ಐ. ಟಿ ಪ್ರಾಂಶುಪಾಲರಾದ ಶ್ರೀ ಎಂ. ಎನ್. ಚನ್ನಬಸಪ್ಪ ಸ್ವಾಗತಿಸಿದರು. ಪ್ರೊ. ಚಂದ್ರಶೇಖರ್ ವಂದಿಸಿದರು.

## : ಶಿಕ್ಷಣ ತಪಾಸಣ ಶಿಬಿರ :

ತುಮಕೂರು ಮತ್ತು ಕೋಲಾರ ಜಿಲ್ಲೆಗಳಿಗೆ ಸಂಬಂಧಿಸಿದಂತೆ ವಿಭಾಗ ಮಟ್ಟದ ಶಿಕ್ಷಣ ತಪಾಸಣಾ ಶಿಬಿರ ಶ್ರೀ ಮಠದಲ್ಲಿ 21 ನೇ ಸೆಪ್ಟಂಬರ್ 95 ರಂದು ನಡೆಯಿತು. ಪೂಜ್ಯ ಶ್ರೀ ಶ್ರೀಗಳು ಶಿಬಿರವನ್ನು ಉದ್ಘಾಟಿಸಿ ಮಾತನಾಡಿದರು. ಈ ಶಿಬಿರ ಮಹತ್ತರ ಅರ್ಥಪೂರ್ಣ ಶ್ರೇಷ್ಠ ಸಮಾರಂಭ. ಶಿಕ್ಷಣದಲ್ಲಿ ಜ್ಞಾನಕ್ಕೆ ಮಿಗಿಲಾದ ಸ್ಥಾನವಿದೆ. ಜ್ಞಾನದ ಶಕ್ತಿ ದೇಶದ ನಾಗರಿಕತೆ ಅಲ್ಲಿಯ ಜನಾಂಗದ ನಾಗರಿಕತೆ ಅವಲಂಬಿಸಿದೆ. ಶಿಕ್ಷಕರು ಪಾಂಡಿತ್ಯ ಪ್ರವೀಣರಾಗಿ ಸೇವೆ ಸಲ್ಲಿಸಬೇಕು. ಶಿಕ್ಷಣದ ಅಧಿಕಾರಿಗಳು ಪವಿತ್ರ ಸೇವಾದೀಕ್ಷೆಯಿಂದ ಕೆಲಸ ಮಾಡಬೇಕು. ಚಿಂತನಶೀಲರಾಗಿ ಎಲ್ಲಾ ಹಂತಗಳಲ್ಲಿ ಶಿಕ್ಷಣಾಧಿಕಾರಿಗಳು ಪ್ರಾಮಾಣಿಕವಾಗಿ ಕರ್ತವ್ಯನಿರ್ವಹಿಸಬೇಕೆಂದು ಕರೆಯಿತ್ತರು.

ಶ್ರೀಮಠದ ವಿದ್ಯಾಸಂಸ್ಥೆಗಳ ನಿರ್ದೇಶಕರಾದ ಶ್ರೀ ಎಂ.ವಿ. ಸಿದ್ಧಲಿಂಗಮೂರ್ತಿಯವರು ಮಾತನಾಡಿ ಶಿಕ್ಷಣ ತಪಾಸಣಾಧಿಕಾರಿಗಳ ಜವಾಬ್ದಾರಿ ಗುರುತರವಾದುದು. ಪಾಠ ಪ್ರವಚನಗಳು ಪರಿಣಾಮಕಾರಿಯಾಗಿ ಸಕಾಲದದಲ್ಲಿ ಪೂರ್ಣವಾಗಬೇಕು. ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಸಮರ್ಥರೀತಿಯಲ್ಲಿ ಕಾರ್ಯ ರೂಪಕ್ಕೆ ತರಬೇಕು ಎಂದು ಒತ್ತಿ ಹೇಳಿದರು.

ವಿಭಾಗದ ಜಂಟಿ ನಿರ್ದೇಶಕರಾದ ಶ್ರೀ ಸಂಪಂಗಿಯವರು ಮಾತನಾಡಿ ತಪಾಸಣೆ ಶಾಲೆಗಳಿಗೆ ಚೈತನ್ಯ ನೀಡುವ ಟಾನಿಕ್ ಇದ್ದಂತೆ. ಮಕ್ಕಳ ಸರ್ವತೋಮುಖ

ಳಿಳವಣಿಗೆಯ ದೃಷ್ಟಿಯಿಂದ ನಿರ್ದೇಶನ, ಮಾರ್ಗದರ್ಶನ, ತರಬೇತಿ, ಕಾರ್ಯಾಗಾರ. ಪುನಃ ಶ್ಚೇತನ ಕಾರ್ಯಕ್ರಮಗಳು ನಿರಂತರವಾಗಿ ಬೇಕು. ಎಲ್ಲಾ ಶಿಕ್ಷಣಾಧಿಕಾರಿಗಳು ಏಕತೆ ಮತ್ತು ಸಮರ್ಪಣಾ ಭಾವದಿಂದ ಅನುಭವಗಳನ್ನು ಹಂಚಿಕೊಳ್ಳಬೇಕೆಂದು ಹೇಳಿದರು. ತುಮಕೂರು ಜಿಲ್ಲೆ ಶಿಕ್ಷಣ ಉಪನಿರ್ದೇಶಕರಾದ ಶ್ರೀ ದೊಡ್ಡಸಿದ್ದಪ್ಪನವರು ಸ್ವಾಗತ ಕೋರಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಈ ಶಿಬಿರದಲ್ಲಿ ಕ್ಷೇತ್ರ ವಿದ್ಯಾಧಿಕಾರಿಗಳು, ಉಪವಿದ್ಯಾಧಿಕಾರಿಗಳು, ವಿಷಯ ಪರಿವೀಕ್ಷಣಾಧಿಕಾರಿಗಳು ಮತ್ತು ಶಾಲಾ ತಪಾಸಣಾಧಿಕಾರಿಗಳು ಭಾಗವಹಿಸಿದ್ದರು.

## : ಶಿಕ್ಷಕರ ದಿನಾಚರಣೆ :

ಶ್ರೀ ಮಠದ ವಿದ್ಯಾಸಂಸ್ಥೆ, ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸೆಪ್ಟೆಂಬರ್ 26, 1995 ಶಿಕ್ಷಕರ ದಿನಾಚರಣೆಯನ್ನು ಆಚರಿಸಲಾಯಿತು.

ಸಮಾರಂಭದ ಅಧ್ಯಕ್ಷತೆಯನ್ನು ಕರ್ನಾಟಕ ಸರ್ಕಾರ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಕೆ.ಪಿ. ಪಾಂಡೆ, ಐ.ಎ ಎಸ್. ಅವರು ವಹಿಸಿದ್ದರು. ಅವರು ಮಾತನಾಡಿ ನಮ್ಮ ಭಾರತ ಪ್ರಾಚೀನ ದೊಡ್ಡದೇಶ. ಇಡೀ ಜಗತ್ತಿಗೆ ಜ್ಞಾನ ಜ್ಯೋತಿಯಾಗಿದೆ. ಸಮಾಜಕ್ಕೆ ದಾರಿ ತೋರಿಸುವವರು ಶಿಕ್ಷಕರು. ಇಂದು ಸಮಾಜ ಕಲುಷಿತವಾಗಿದೆ. ಇದಕ್ಕೆ ಕಾರಣ ಶಿಕ್ಷಕರು. ಒಳ್ಳೆಯದನ್ನು ಕಾಣಬೇಕಾದರೆ ಶಿಕ್ಷಕರನ್ನು ಅವಲಂಬಿಸಿದೆ. ಎಲ್ಲರು ತಮ್ಮ ತಮ್ಮ ಸ್ಥಾನಗಳಲ್ಲಿ ನಿಪುಣರಾಗಿ ಸೇವೆ ಸಲ್ಲಿಸಬೇಕು.

ಶ್ರೀಮಠದಲ್ಲಿ ಶ್ರೀ ಶ್ರೀಗಳವರ ದಿನಚರಿ ಜೀವನ ನೋಡಿದರೆ ಜ್ಞಾನಿಗಳಾಗುತ್ತಾರೆ. 65 ವರ್ಷಗಳ ಶ್ರೀ ಮಠದ ಪೀಠಾಧಿಕಾರಿಗಳಾಗಿ ಸಮಾಜ ಮತ್ತು ರಾಷ್ಟ್ರಕ್ಕೆ ಅಗಾಧವಾದ ಸೇವೆ ಸಲ್ಲಿಸಿದ್ದಾರೆ. ಇಲ್ಲಿಯ ಅಭಿವೃದ್ಧಿ ಕಾರ್ಯಗಳು ಜಗದ್ವಿಖ್ಯಾತವಾಗಿವೆ. ಅವರ ಹಾದಿಯಲ್ಲಿ ನಡೆದು ಉಪದೇಶ ನಡೆವಳಿಕೆಯಿಂದ ನಮ್ಮ ಜೀವನವನ್ನು ಉದಾತ್ತಗೊಳಿಸಿಕೊಳ್ಳಬೇಕು. ಶ್ರೀಗಳವರ ದರ್ಶನ ಪಡೆದದ್ದು ನನ್ನ ಪುಣ್ಯವೆಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಶ್ರೀ ಶ್ರೀ ಗಳ ವಜ್ರ ಮಹೋತ್ಸವ ಸಮಿತಿ ಅಧ್ಯಕ್ಷರಾದ ಪದ್ಮಭೂಷಣ ನೇತ್ರದಾನಿ ಡಾ. ಎಂ. ಸಿ. ಮೋದಿಯವರು ಮಾತನಾಡಿ ಶಿಕ್ಷಣದಲ್ಲಿ ಅಪಾರವಾಗಿ ಸೇವೆ ಸಲ್ಲಿಸಿರುವ ಸ್ವಾಮಿಗಳೆಂದರೆ ಶ್ರೀ ಸಿದ್ಧಗಂಗಾ ಸ್ವಾಮಿಗಳು. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಂದ ಶ್ರೀ ಮಠ ಬೃಹದಾಕಾರವಾಗಿ ಬೆಳೆದಿದೆ. ಶ್ರೀ ಮಠದ ಹೆಸರು ಮತ್ತು ಕೀರ್ತಿ ದೇಶ ವಿದೇಶಗಳಲ್ಲಿ ಹರಡಿದೆ. ಸಹಸ್ರ ಸಹಸ್ರ

ಮಂದಿಗೆ ಇಲ್ಲಿ ದಾಸೋಹ ನಡೆಯುತ್ತಿದೆ. ಕರ್ನಾಟಕದ ಬಸವಣ್ಣನವರನ್ನು ಶ್ರೀ ಸಿದ್ಧಗಂಗೆಯಲ್ಲಿ ನೋಡಬಹುದಾಗಿದೆ. ಶಿಕ್ಷಕರು ಯಾವಾಗಲೂ ಶಿಕ್ಷಕರಾಗಿಯೇ ಉಳಿದು ವಿದ್ಯಾರ್ಥಿಗಳನ್ನು ರಾಷ್ಟ್ರದ ಉಪಯುಕ್ತ ಪ್ರಜೆಗಳನ್ನಾಗಿ ರೂಪಿಸಬೇಕೆಂದು ಕರೆಯಿತ್ತರು.

ತುಮಕೂರು ಜಿಲ್ಲೆ ಶಿಕ್ಷಣ ಉಪನಿರ್ದೇಶಕರಾದ ಶ್ರೀ ದೊಡ್ಡಸಿದ್ದಪ್ಪನವರು ನಿವೃತ್ತ ಶಿಕ್ಷಕರು ಮತ್ತು ಸಿಬ್ಬಂದಿ ವರ್ಗದವರಿಗೆ ಸನ್ಮಾನ ನೀಡಿ ಮಾತನಾಡಿದರು. ನಾನು ಶ್ರೀ ಮಠದ ಹಳೆಯ ವಿದ್ಯಾರ್ಥಿ. ಇಲ್ಲಿ ಶಿಕ್ಷಣ ಪಡೆದುದು ಹೆಮ್ಮೆ. ಶ್ರೀ ಮಠದಲ್ಲಿ ಶಿಕ್ಷಣ ಪಡೆದ ಲಕ್ಷಾಂತರ ಮಂದಿ ಹಳೆಯ ವಿದ್ಯಾರ್ಥಿಗಳು ಜಗತ್ತಿನ ಎಲ್ಲಾ ಭಾಗಗಳಲ್ಲಿ ನಾಗರಿಕರಾಗಿ ಬಾಳುತ್ತಿದ್ದಾರೆ. ವಿದ್ಯಾರ್ಥಿಗಳು ರಾಷ್ಟ್ರದ ಭವಿಷ್ಯವನ್ನು ಉಜ್ವಲಗೊಳಿಸಬೇಕು. ಶಿಕ್ಷಕ ಸಮಾಜದ ಶಿಷ್ಟಾಚಾರ ಮತ್ತು ಉತ್ತಮ ಚಾರಿತ್ರ್ಯದಿಂದ ಕೂಡಿ ಸದಾ ಸನ್ಮಾರ್ಗದಲ್ಲಿ ನಡೆಯಬೇಕೆಂದು ಹೇಳಿದರು.

ಸಮಾರಂಭದಲ್ಲಿ ಎಸ್.ಐ.ಟಿ. ತಾಂತ್ರಿಕ ನಿರ್ದೇಶಕರಾದ ಶ್ರೀ ಜಿ. ಪರಮೇಶ್ವರಪ್ಪ ಮತ್ತು ಶ್ರೀ ಶ್ರೀ ಗಳ ವಜ್ರ ಮಹೋತ್ಸವ ಸಮಿತಿ ಕಾರ್ಯದರ್ಶಿಗಳಾದ ಶ್ರೀ ಎಸ್. ಎಸ್. ಹಸಬಿ ಉಪಸ್ಥಿತರಿದ್ದರು.

**: ಶ್ರೀ ಶ್ರೀ ಗಳವರ ಸಂದೇಶ :**

ರಾಷ್ಟ್ರಪತಿಯಾಗಿದ್ದ ಡಾ. ರಾಧಾಕೃಷ್ಣ ಅವರ ಹುಟ್ಟುಹಬ್ಬವಾಗಿ ಶಿಕ್ಷಕರ ದಿನಾಚರಣೆ ಆಚರಿಸಲಾಗುತ್ತಿದೆ. ಅವರು ದೂರದೃಷ್ಟಿ ಉಳ್ಳವರಾಗಿ-ಯೋಚನೆ ಮಾಡಿ ತಮ್ಮ ಜನ್ಮ ದಿನವನ್ನು ಶಿಕ್ಷಕರಿಗೆ ಸಂಬಂಧ ಕಲ್ಪಿಸಿದ್ದಾರೆ. ಇಂದು ಎಲ್ಲಾ ಕ್ಷೇತ್ರಗಳಲ್ಲಿ ಪ್ರಾಮಾಣಿಕತೆ ಕ್ಷೀಣಿಸಿ ನೈತಿಕ ಅದಃಪತನವಾಗಿದೆ. ಜಗತ್ತು ಅಪಾಯದ ಅಂಚಿನಲ್ಲಿದೆ. ಶಿಕ್ಷಕರ ಸ್ಥಾನ ಉನ್ನತವಾದುದು. ಮಾನವನ ಸೇವಾ ಕ್ಷೇತ್ರದಲ್ಲಿ ಪ್ರಮುಖವಾದುದು. ಭಾರತೀಯ ಸಂಸ್ಕೃತಿ ಶಿಕ್ಷಕರನ್ನು ಆಚಾರ್ಯದೇವೋಭವ ಎಂದು ಕರೆದಿದೆ. ಶಿಕ್ಷಕ ಮಕ್ಕಳಿಗೆ ಸ್ನೇಹಿತನಾಗಿ, ಮಾರ್ಗದರ್ಶಕನಾಗಿ ಮತ್ತು ತತ್ವಜ್ಞಾನಿಯಾಗಿ ಒಳ್ಳೆಯ ದಾರಿ ತೋರಬೇಕು. ಜ್ಞಾನದ ಬಲದಿಂದ ಅಜ್ಞಾನದ ಕೇಡು ಉಂಟಾಗಬಾರದು. ಇದರ ಅರ್ಥವನ್ನು ಅರಿತು ಶಿಕ್ಷಕರು ಪವಿತ್ರ ಜ್ಞಾನಜ್ಯೋತಿಗಳಾಗಿ ಅಭಿಮಾನದಿಂದ ಸೇವೆ ಸಲ್ಲಿಸಬೇಕೆಂದು ಕರೆಯಿತ್ತರು.

ಪ್ರಾರಂಭಕ್ಕೆ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆ ನಡೆಯಿತು. ಶ್ರೀ ಪಿ.ಎನ್. ಚಂದ್ರಶೇಖರಯ್ಯ ಸ್ವಾಗತ ಕೋರಿದರು. ಶ್ರೀ ಹೆಚ್.ಬಿ. ಗಂಗಾಧರಯ್ಯ ಮುಖ್ಯ ಗಣ್ಯರ ಪರಿಚಯ ಮಾಡಿದರು. ಶ್ರೀ ಜಿ. ಕುಮಾರಸ್ವಾಮಿ ವಂದನೆ ಸಲ್ಲಿಸಿದರು. ಶ್ರೀ ಡಿ.ಎಸ್ ನಾಗರಾಜು ಕಾರ್ಯಕ್ರಮ ನಿರೂಪಿಸಿದರು.

"SIDDAGANGA" MONTHLY Reg. No. KRNQ - 9



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.